# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

## ವಿಶೇಷ ಪತ್ರಿಕೆ

| ಭಾಗ – **IV-A** | ಬೆಂಗಳೂರು, ಶುಕ್ರವಾರ, ಮಾರ್ಚ್ ೩೦, ೨೦೧೨ (ಚೈತ್ರ ೧೦, ಶಕ ವರ್ಷ ೧೯೩೪) | ನಂ. ೨೩೮ |
|---|---|---|


## TRANSPORT SECRETARIAT

### NOTIFICATION

**No. SARIE 6 SAENI 2012, Bangalore, Dated: 29.3.2012**

In exercise of the powers conferred by sub-clause (1) of section-16 of the Karnataka Motor Vehicle Taxation Act, 1957 (Karnataka Act 35 of 1957) the Government of Karnataka, hereby exempt from payment of Road Tax and also payment of Registration fee to the following Personal Vehicle of Ms. Yvonne Rohner, Attache of the Swiss Consulate General of Switzerland.

| | | |
|---|---|---|
| Name of the Foreign | : | Ms. Yvonne Rohner, Attache of the Swiss Consulate General of Switzerland. |
| Representation | | |
| Personal Vehicle | : | 05 CC 3A (Mahindra and Mahindra) |

(* Vehicle No. to be assigned by the jurisdictional R.T.O.)

By order and in the name of the Governor of Karnataka,

**RAMACHANDRA**
Under Secretary to Government,
Transport Department


## ವಿಶೇಷ ಪತ್ರಿಕೆ

| ಭಾಗ – **IV-A** | ಬೆಂಗಳೂರು, ಶುಕ್ರವಾರ, ಮಾರ್ಚ್ ೩೦, ೨೦೧೨ (ಚೈತ್ರ ೧೦, ಶಕ ವರ್ಷ ೧೯೩೪) | ನಂ. ೨೩೯ |
|---|---|---|


## TRANSPORT SECRETARIAT

### NOTIFICATION

**No. SARIE 5 SAENI 2012, Bangalore, Dated: 29.3.2012**

In exercise of the powers conferred by sub-clause (1) of section-16 of the Karnataka Motor Vehicle Taxation Act, 1957 (Karnataka Act 35 of 1957) the Government of Karnataka, hereby exempt from payment of Road Tax and also payment of Registration fee to the following Personal Vehicle of Mr. Ian Felton, British Deputy High Commissioner.

Name of the Foreign Representation : Mr. Ian Felton, British Deputy High Commissioner.

Personal Vehicle : **04 CC 1A (Maruti Wagno R)**

(* Vehicle No. to be assigned by the jurisdictional R.T.O.)

By order and in the name of the Governor of Karnataka,

**RAMACHANDRA**
Under Secretary to Government,
Transport Department

# ವಿಶೇಷ ಪತ್ರಿಕೆ



| ಭಾಗ – IV-A | ಬೆಂಗಳೂರು, ಶುಕ್ರವಾರ, ಮಾರ್ಚ್ ೩೦, ೨೦೧೨ (ಚೈತ್ರ ೧೦, ಶಕ ವರ್ಷ ೧೯೩೪) | ನಂ. ೨೪೩ |
|---|---|---|



**KARNATAKA LEGISLATIVE ASSEMBLY SECRETARIAT**

**NOTIFICATION**

**No. KLA/LGA/18/Bill/2012, Bangalore, Dated: 30.3.2012**

The following Bill was introduced in Legislative Assembly on 30.3.2012.

**ಕರ್ನಾಟಕ ವಿಧಾನ ಸಭೆ**

**ಹದಿಮೂರನೇ ವಿಧಾನ ಸಭೆ**

**ಹದಿಮೂರನೇ ಅಧಿವೇಶನ**

## ಕರ್ನಾಟಕ ವೃತ್ತಿ ಶಿಕ್ಷಣ ಸಂಸ್ಥೆಗಳ (ಪ್ರವೇಶ ನಿಯಂತ್ರಣ ಮತ್ತು ಶುಲ್ಕ ನಿಗದಿ) (ವಿಶೇಷ ಉಪಬಂಧಗಳು) ವಿಧೇಯಕ, 2012

**(2012ರ ವಿಧಾನ ಸಭೆಯ ವಿಧೇಯಕ ಸಂಖ್ಯೆ 18)**

ರಾಜ್ಯ ಸರ್ಕಾರ ಮತ್ತು ವೃತ್ತಿ ಶಿಕ್ಷಣ ಕೋರ್ಸುಗಳ ಶಿಕ್ಷಣ ನೀಡುತ್ತಿರುವ ಅನುದಾನಿತವಲ್ಲದ ಖಾಸಗಿ ಶಿಕ್ಷಣ ಸಂಸ್ಥೆಗಳ ನಡುವೆ ಮಾಡಿಕೊಳ್ಳಲು ಪ್ರಸ್ತಾವಿಸಲಾದ ಸಮ್ಮತಾಭಿಪ್ರಾಯದ ವ್ಯವಸ್ಥೆ ಅಥವಾ ಒಪ್ಪಂದಕ್ಕೆ ಮಾನ್ಯತೆ ನೀಡುವುದಕ್ಕಾಗಿ ಮತ್ತು 2005 (6) ಎಸ್‌ಸಿಸಿ 537 ರಲ್ಲಿ ವರದಿಯಾದ ಪಿ.ಎ. ಇನಾಂದಾರ್ ಮತ್ತು ಇತರರು – ವಿರುದ್ಧ – ಮಹಾರಾಷ್ಟ್ರ ರಾಜ್ಯ – ಪ್ರಕರಣದಲ್ಲಿ ಸರ್ವೋಚ್ಚ ನ್ಯಾಯಾಲಯವು ನೀಡಿದ ತೀರ್ಪಿನಲ್ಲಿ ಉಪಬಂಧಿಸಲಾದಂಥ ಇತರ ವಿಷಯಗಳಿಗೆ ಉಪಬಂಧ ಕಲ್ಪಿಸುವುದಕ್ಕಾಗಿ ಒಂದು ವಿಧೇಯಕ.

ಇಲ್ಲಿ ಇನ್ನು ಮುಂದೆ ಕಂಡುಬರುವ ಉದ್ದೇಶಗಳಿಗಾಗಿ ಮತ್ತು ರಾಜ್ಯ ಸರ್ಕಾರವು, ಕರ್ನಾಟಕ ನಿವಾಸಿ ವಿದ್ಯಾರ್ಥಿಗಳ ಮತ್ತು ಶೈಕ್ಷಣಿಕವಾಗಿ ಮತ್ತು ಸಾಮಾಜಿಕವಾಗಿ ಹಿಂದುಳಿದ ವರ್ಗಗಳ ವಿದ್ಯಾರ್ಥಿಗಳ ಹಿತರಕ್ಷಣೆಗಾಗಿ 2006–07, 2007–08, 2008–09, 2009–10, 2010–11 ಮತ್ತು 2011–12 ವರ್ಷಗಳಲ್ಲಿ ಖಾಸಗಿ ಅನುದಾನಿತವಲ್ಲದ ವೃತ್ತಿ ಶಿಕ್ಷಣ ಸಂಸ್ಥೆಗಳೊಡನೆ ಸಮ್ಮತಾಭಿಪ್ರಾಯದ ವ್ಯವಸ್ಥೆ ಅಥವಾ ಒಪ್ಪಂದ ಮಾಡಿಕೊಂಡಿರುವುದರಿಂದ ಮತ್ತು 2012–13ನೇ ವರ್ಷದಲ್ಲಿ ಸಮ್ಮತಾಭಿಪ್ರಾಯದ ವ್ಯವಸ್ಥೆ ಅಥವಾ ಒಪ್ಪಂದ ಮಾಡಿಕೊಳ್ಳಲು ಉದ್ದೇಶಿಸಿರುವುದರಿಂದ ಮತ್ತು 2012–13ನೇ ಶೈಕ್ಷಣಿಕ ವರ್ಷದಲ್ಲಿ ಖಾಸಗಿ ಅನುದಾನಿತವಲ್ಲದ ವೃತ್ತಿ ಶಿಕ್ಷಣ ಸಂಸ್ಥೆಗಳಲ್ಲಿ ಪ್ರವೇಶ ಮತ್ತು ಶುಲ್ಕ ನಿಗದಿಗಾಗಿ ಕರ್ನಾಟಕ ವೃತ್ತಿ ಶಿಕ್ಷಣ ಸಂಸ್ಥೆಗಳ (ಪ್ರವೇಶ ನಿಯಂತ್ರಣ ಮತ್ತು ಶುಲ್ಕ ನಿಗದಿ) ಅಧಿನಿಯಮ, 2006ನ್ನು (2006ರ ಕರ್ನಾಟಕ ಅಧಿನಿಯಮ 8) ತಡೆಹಿಡಿಯಬೇಕೆಂದು ಅಭಿಪ್ರಾಯ ಪಟ್ಟಿರುವುದರಿಂದ;

ಇದು ಭಾರತ ಗಣರಾಜ್ಯದ ಅರವತ್ತೂರನೇ ವರ್ಷದಲ್ಲಿ ಕರ್ನಾಟಕ ರಾಜ್ಯ ವಿಧಾನಮಂಡಲದಿಂದ ಈ ಮುಂದಿನಂತೆ ಅಧಿನಿಯಮಿತವಾಗಲಿ, ಎಂದರೆ:–

**1. ಸಂಕ್ಷಿಪ್ತ ಹೆಸರು, ಪ್ರಾರಂಭ ಮತ್ತು ಅನ್ವಯ.–** (1) ಈ ಅಧಿನಿಯಮವನ್ನು ಕರ್ನಾಟಕ ವೃತ್ತಿ ಶಿಕ್ಷಣ ಸಂಸ್ಥೆಗಳ (ಪ್ರವೇಶ ನಿಯಂತ್ರಣ ಮತ್ತು ಶುಲ್ಕ ನಿಗದಿ) (ವಿಶೇಷ ಉಪಬಂಧಗಳು) ಅಧಿನಿಯಮ, 2012 ಎಂದು ಕರೆಯತಕ್ಕದ್ದು.

(2) ಇದು ಈ ಕೂಡಲೇ ಜಾರಿಗೆ ಬರತಕ್ಕದ್ದು.

(3) ಕರ್ನಾಟಕ ವೃತ್ತಿ ಶಿಕ್ಷಣ ಸಂಸ್ಥೆಗಳ (ಪ್ರವೇಶ ನಿಯಂತ್ರಣ ಮತ್ತು ಶುಲ್ಕ ನಿಗದಿ) ಅಧಿನಿಯಮ, 2006 ರಲ್ಲಿ (2006ರ ಕರ್ನಾಟಕ ಅಧಿನಿಯಮ 8) ಏನೇ ಒಳಗೊಂಡಿದ್ದರೂ 2012-13ನೇ ಶೈಕ್ಷಣಿಕ ವರ್ಷಕ್ಕಾಗಿ ಅನುದಾನಿತವಲ್ಲದ ಖಾಸಗಿ ವೃತ್ತಿ ಶಿಕ್ಷಣ ಸಂಸ್ಥೆಯಲ್ಲಿ ಪ್ರವೇಶಗಳು ಮತ್ತು ಶುಲ್ಕ ನಿಗದಿ ಈ ಅಧಿನಿಯಮದ ಉಪಬಂಧಗಳ ಅನುಸಾರವಾಗಿ ನಡೆಯತಕ್ಕದ್ದು.

**2. ಪರಿಭಾಷೆಗಳು.–** ಈ ಅಧಿನಿಯಮದಲ್ಲಿ ಸಂದರ್ಭಕ್ಕೆ ಅನ್ಯಥಾ ಅಗತ್ಯವಿದ್ದ ಹೊರತು,–

(ಎ) "ಸಾಮಾನ್ಯ ಪ್ರವೇಶ ಪರೀಕ್ಷೆ" ಎಂದರೆ, ಏಕಗವಾಕ್ಷಿ ಪ್ರಕ್ರಿಯೆಯ ಮೂಲಕ ವೃತ್ತಿ ಶಿಕ್ಷಣ ವ್ಯಾಸಂಗ ಕ್ರಮಗಳಿಗೆ ಪ್ರವೇಶ ನೀಡುವ ಉದ್ದೇಶಕ್ಕಾಗಿ ಅಭ್ಯರ್ಥಿಗಳ ಅರ್ಹತೆ (ಮೆರಿಟ್) ಯನ್ನು ನಿರ್ಧರಿಸುವುದಕ್ಕಾಗಿ ನಡೆಸಲಾಗುವ ಪರೀಕ್ಷೆ ಮತ್ತು ತರುವಾಯದ ಕೇಂದ್ರೀಯ ಕೌನ್ಸೆಲಿಂಗ್ ವ್ಯವಸ್ಥೆ;

(ಬಿ) "ಸಾಮಾನ್ಯ ಪ್ರವೇಶ ಪರೀಕ್ಷಾ ಘಟಕ" ಎಂದರೆ, ಸಾಮಾನ್ಯ ಪ್ರವೇಶ ಪರೀಕ್ಷೆ ನಡೆಸುವ ರಾಜ್ಯ ಸರ್ಕಾರದ ಕರ್ನಾಟಕ ಪರೀಕ್ಷಾ ಪ್ರಾಧಿಕಾರ ಎಂದು ಕರೆಯಲಾಗುವ ಒಂದು ಏಜೆನ್ಸಿ;

(ಸಿ) "ಸಮ್ಮತಾಭಿಪ್ರಾಯದ ವ್ಯವಸ್ಥೆ ಅಥವಾ ಒಪ್ಪಂದ" ಎಂದರೆ, ವೃತ್ತಿ ಶಿಕ್ಷಣ ಕೋರ್ಸುಗಳಿಗೆ ಪ್ರವೇಶ ಮತ್ತು ಶುಲ್ಕನಿಗದಿಗೆ ಸಂಬಂಧಿಸಿದಂತೆ ರಾಜ್ಯ ಸರ್ಕಾರ ಮತ್ತು ಅನುದಾನಿತವಲ್ಲದ ಖಾಸಗಿ ವೃತ್ತಿ ಶಿಕ್ಷಣ ಸಂಸ್ಥೆಗಳ ಸಂಘ ತಮ್ಮ ನಡುವೆ ಮಾಡಿಕೊಳ್ಳಬಹುದಾದ ಯಾವುದೇ ಒಪ್ಪಂದ;

(ಡಿ) "ಸಂಸ್ಥೆ" ಎಂದರೆ, ವೃತ್ತಿ ಶಿಕ್ಷಣ ಕೋರ್ಸ್‌ಗಳ ವಿದ್ಯಾಭ್ಯಾಸ ನೀಡುತ್ತಿರುವ ವೃತ್ತಿ ಶಿಕ್ಷಣ ಸಂಸ್ಥೆಗಳು;

(ಇ) "ಏಕ ಸದಸ್ಯ ನಿಯಂತ್ರಕ ಸಮಿತಿ" ಎಂದರೆ, 3ನೇ ಪ್ರಕರಣದ ಅಡಿಯಲ್ಲಿ ರಾಜ್ಯ ಸರ್ಕಾರವು ರಚಿಸಿದ ಸಮಿತಿ;

(ಎಫ್) "ವೃತ್ತಿ ಶಿಕ್ಷಣ ಕೋರ್ಸುಗಳು" ಎಂದರೆ,–

(I) ವೈದ್ಯಕೀಯ ಮತ್ತು ದಂತ ವೈದ್ಯ ಶಿಕ್ಷಣ ಸಂಸ್ಥೆಗಳಲ್ಲಿ,

(ಎ) ಬ್ಯಾಚುಲರ್ ಆಫ್ ಮೆಡಿಸಿನ್ ಮತ್ತು ಬ್ಯಾಚುಲರ್ ಆಫ್ ಸರ್ಜರಿ; ಮತ್ತು

(ಬಿ) ಬ್ಯಾಚುಲರ್ ಆಫ್ ಡೆಂಟಲ್ ಸರ್ಜರಿ

(II) ಇಂಜಿನಿಯರ್ ಸಂಸ್ಥೆಗಳಲ್ಲಿ,

(ಎ) ಬ್ಯಾಚುಲರ್ ಆಫ್ ಇಂಜಿನಿಯರಿಂಗ್;

(ಬಿ) ಬ್ಯಾಚುಲರ್ ಆಫ್ ಟೆಕ್ನಾಲಜಿ

(ಸಿ) ಬ್ಯಾಚುಲರ್ ಆಫ್ ಆರ್ಕಿಟೆಕ್ಚರ್;

(III) ವೈದ್ಯಕೀಯ ಮತ್ತು ದಂತ ವಿಜ್ಞಾನಗಳ ಸ್ನಾತಕೋತ್ತರ ಪದವಿ ಮತ್ತು ಡಿಪ್ಲೊಮೊ ಕೋರ್ಸುಗಳು;

(IV) ರಾಜ್ಯ ಸರ್ಕಾರವು ಅಧಿಸೂಚಿಸಬಹುದಾದಂಥ ಇತರ ಕೋರ್ಸುಗಳು.

(ಜಿ) "ಅನುದಾನಿತವಲ್ಲದ ಸಂಸ್ಥೆ" ಎಂದರೆ, ರಾಜ್ಯ ಸರ್ಕಾರದಿಂದ ಯಾವುದೇ ಅನುದಾನವನ್ನು ಅಥವಾ ಸಹಾಯಾನುದಾನವನ್ನು ಸ್ವೀಕರಿಸದ ಯಾವುದೇ ಖಾಸಗಿ ಆಡಳಿತವುಳ್ಳ ವೃತ್ತಿ ಶಿಕ್ಷಣ ಸಂಸ್ಥೆ.

**3. ಏಕ ಸದಸ್ಯ ನಿಯಂತ್ರಕ ಸಮಿತಿಯ ರಚನೆ.–** ರಾಜ್ಯದ ಯಾವುದೇ ವಿಶ್ವವಿದ್ಯಾಲಯದ ಮಾಜಿ ಕುಲಪತಿಯವರು ಸದಸ್ಯರಾಗಿರುವ, ರಾಜ್ಯ ಸರ್ಕಾರವು ನೇಮಿಸಿದ ಒಂದು ಏಕ ಸದಸ್ಯ ನಿಯಂತ್ರಕ ಸಮಿತಿಯು ಇರತಕ್ಕದ್ದು. ಸದರಿ ಏಕಸದಸ್ಯ ನಿಯಂತ್ರಕ ಸಮಿತಿಯು, ಈ ಅಧಿನಿಯಮದ ಉಪಬಂಧಗಳಿಗೆ ಅನುಸಾರವಾಗಿ ಮಾಡಿಕೊಂಡ ವೃತ್ತಿ ಶಿಕ್ಷಣ ಕೋರ್ಸುಗಳಿಗೆ ಪ್ರವೇಶದ ಮತ್ತು ಸಮ್ಮತಾಭಿಪ್ರಾಯ ವ್ಯವಸ್ಥೆ ಅಥವಾ ಒಪ್ಪಂದದ ಅನುಷ್ಠಾನದ ಮೇಲ್ವಿಚಾರಣೆಯನ್ನು ನಡೆಸತಕ್ಕದ್ದು.

**4. ಶುಲ್ಕದ ನಿಗದಿ.–** ಈ ಅಧಿನಿಯಮದ ಪ್ರಾರಂಭದ ದಿನಾಂಕದಂದು ಜಾರಿಯಲ್ಲಿರುವ ವೃತ್ತಿ ಶಿಕ್ಷಣ ಸಂಸ್ಥೆಗಳ ಸಂಬಂಧದಲ್ಲಿ ನಿಗದಿಪಡಿಸಿದ ಶುಲ್ಕ ಏನೇ ಇದ್ದರೂ, ರಾಜ್ಯ ಸರ್ಕಾರವು, ಸಮ್ಮತಾಭಿಪ್ರಾಯದ ವ್ಯವಸ್ಥೆ ಅಥವಾ ಒಪ್ಪಂದದ ಅನುಸಾರವಾಗಿ, ಅಧಿಸೂಚನೆಯ ಮೂಲಕ, ಅನುದಾನಿತವಲ್ಲದ ಖಾಸಗಿ ವೃತ್ತಿ ಶಿಕ್ಷಣ ಸಂಸ್ಥೆಗಳ ಪ್ರವೇಶಕ್ಕೆ ಸಂದಾಯಮಾಡಬೇಕಾದ ಶುಲ್ಕವನ್ನು ನಿಗದಿಗೊಳಿಸಬಹುದು. ಬೇರೆ ಬೇರೆ ಪ್ರವರ್ಗದ ವಿದ್ಯಾರ್ಥಿಗಳಿಗೆ ಬೇರೆ ಬೇರೆ ಶುಲ್ಕದ ದರವನ್ನು ನಿಗದಿಗೊಳಿಸಬಹುದು.

**5. ಪ್ರವೇಶ ನಿಯಂತ್ರಣ ಮತ್ತು ಸೀಟು ಹಂಚಿಕೆ ಪ್ರಮಾಣ.–** ಸಮ್ಮತಾಭಿಪ್ರಾಯದ ವ್ಯವಸ್ಥೆ ಅಥವಾ ಒಪ್ಪಂದವನ್ನು ಪರಿಣಾಮಕಾರಿಯಾಗಿ ಅನುಷ್ಠಾನಗೊಳಿಸುವುದಕ್ಕಾಗಿ, ಖಾಸಗಿ ಅನುದಾನಿತವಲ್ಲದ ವೃತ್ತಿ ಶಿಕ್ಷಣ ಸಂಸ್ಥೆಯಲ್ಲಿ ಸೀಟುಗಳನ್ನು ಈ ಮುಂದಿನ ರೀತಿಯಲ್ಲಿ ಭರ್ತಿ ಮಾಡತಕ್ಕದ್ದು, ಎಂದರೆ:–

(i) 2012–13ನೇ ವರ್ಷಕ್ಕೆ, ಸರ್ಕಾರವು ಸಮ್ಮತಾಭಿಪ್ರಾಯದ ವ್ಯವಸ್ಥೆ ಅಥವಾ ಒಪ್ಪಂದದಡಿಯಲ್ಲಿ ಒಪ್ಪಬಹುದಾದಂಥ ಸಂಖ್ಯೆಯ ಸೀಟುಗಳನ್ನು ಕರ್ನಾಟಕ ವೃತ್ತಿ ಶಿಕ್ಷಣ ಸಂಸ್ಥೆಗಳಲ್ಲಿ ಸರ್ಕಾರಿ ಸೀಟುಗಳಿಗೆ ಪ್ರವೇಶಕ್ಕಾಗಿ ವಿದ್ಯಾರ್ಥಿಗಳ ಆಯ್ಕೆ ನಿಯಮಗಳು, 2006ಕ್ಕೆ ಅನುಸಾರವಾಗಿ ಸರ್ಕಾರಿ ಸಾಮಾನ್ಯ ಪ್ರವೇಶ ಪರೀಕ್ಷೆ ಘಟಕದ ಮೂಲಕ ತುಂಬತಕ್ಕದ್ದು.

(ii) ಸಮ್ಮತಾಭಿಪ್ರಾಯದ ವ್ಯವಸ್ಥೆ ಅಥವಾ ಒಪ್ಪಂದದಲ್ಲಿ ಅನ್ಯಥಾ ನಿರ್ದಿಷ್ಟಪಡಿಸಿದ ಹೊರತು, ಉಳಿದ ಸೀಟುಗಳನ್ನು ನಿಯಮಿಸಬಹುದಾದಂಥ ನಿಯಮಗಳಿಗೆ ಒಳಪಟ್ಟು ನಿರ್ಧರಿಸಲಾದ ಅರ್ಹತೆಯ ಆಧಾರದ ಮೇಲೆ ನ್ಯಾಯಯುತ ಹಾಗೂ ಪಾರದರ್ಶಕ ರೀತಿಯಲ್ಲಿ ಸಂದರ್ಭಾನುಸಾರ ಖಾಸಗಿ ವೃತ್ತಿ ಶಿಕ್ಷಣ ಸಂಸ್ಥೆಗಳ ಸಂಘ ಅಥವಾ ಧಾರ್ಮಿಕ ಮತ್ತು ಭಾಷಾ ಅಲ್ಪಸಂಖ್ಯಾತರ ಸಂಸ್ಥೆಗಳ ಸಂಘ ನಡೆಸಿದ ಸಾಮಾನ್ಯ ಪ್ರವೇಶ ಪರೀಕ್ಷೆ ಹಾಗೂ ತರುವಾಯ ನಡೆಸಲಾಗುವ ಕೇಂದ್ರೀಯ ಕೌನ್ಸಿಲಿಂಗ್ ಮೂಲಕ ತುಂಬತಕ್ಕದ್ದು.

(2) ರಾಜ್ಯ ಸರ್ಕಾರದ ಮೀಸಲಾತಿ ನೀತಿ ಮತ್ತು ಸಮ್ಮತಾಭಿಪ್ರಾಯದ ವ್ಯವಸ್ಥೆ ಅಥವಾ ಒಪ್ಪಂದಕ್ಕೆ ಒಳಪಟ್ಟು, ರಾಜ್ಯ ಸರ್ಕಾರವು ವಿವಿಧ ಪ್ರವರ್ಗದ ಸಂಸ್ಥೆಗಳ ಸಂಬಂಧದಲ್ಲಿ ವಿವಿಧ ಪ್ರವರ್ಗದ ವಿದ್ಯಾರ್ಥಿಗಳನ್ನು ಸಾಮಾನ್ಯ ಪ್ರವೇಶ ಪರೀಕ್ಷಾ ಘಟಕದವರು ಹಾಗೂ ಆಡಳಿತ ಮಂಡಳಿಯವರು ತುಂಬಬೇಕಾದ ಸೀಟುಗಳ ಹಂಚಿಕೆ ಪ್ರಮಾಣವನ್ನು ಅಧಿಸೂಚನೆಯ ಮೂಲಕ ಪ್ರಕಟಿಸಬಹುದು.

**6. ಈ ಅಧಿನಿಯಮವನ್ನು ಉಲ್ಲಂಘಿಸಿ ಮಾಡಿದ ಪ್ರವೇಶಗಳು ಅಸಿಂಧುವಾಗಿರುವುದು.–** ಈ ಅಧಿನಿಯಮದ ಉಪಬಂಧಗಳನ್ನು ಅಥವಾ ಸಮ್ಮತಾಭಿಪ್ರಾಯ ವ್ಯವಸ್ಥೆ ಅಥವಾ ಒಪ್ಪಂದವನ್ನು ಉಲ್ಲಂಘಿಸಿ ಯಾವುವೇ ಖಾಸಗಿ ಅನುದಾನಿತವಲ್ಲದ ವೃತ್ತಿ ಶಿಕ್ಷಣ ಸಂಸ್ಥೆಗಳು 2012–13ನೇ ಶೈಕ್ಷಣಿಕ ವರ್ಷಕ್ಕಾಗಿ ಈ ಅಧಿನಿಯಮದ ಪ್ರಾರಂಭಕ್ಕೆ ಮೊದಲು ಅಥವಾ ತರುವಾಯ ಮಾಡಿದ ಎಲ್ಲ ಪ್ರವೇಶಗಳು ಅಸಿಂಧುವಾಗಿರತಕ್ಕದ್ದು. ಅಂಥ ಉಲ್ಲಂಘನೆಯ ಸಂಬಂಧದಲ್ಲಿ ರಾಜ್ಯ ಸರ್ಕಾರವು ಅಂಥ ಪ್ರವೇಶಗಳನ್ನು ಅಥವಾ ಸಂದರ್ಭಾನುಸಾರ ಅಂಥ ಸಂಸ್ಥೆಯ ಸಂಯೋಜನೆಯನ್ನು ರದ್ದುಪಡಿಸುವುದಕ್ಕೆ ಸಂಬಂಧಪಟ್ಟ ವಿಶ್ವವಿದ್ಯಾಲಯಕ್ಕೆ ನಿರ್ದೇಶಿಸಬಹುದು.

**7. ತೊಂದರೆಗಳನ್ನು ನಿವಾರಿಸುವ ಅಧಿಕಾರ.–** ಈ ಅಧಿನಿಯಮದ ಉಪಬಂಧಗಳನ್ನು ಕಾರ್ಯರೂಪಕ್ಕೆ ತರುವಲ್ಲಿ ಯಾವುದೇ ತೊಂದರೆ ಉದ್ಭವಿಸಿದಲ್ಲಿ, ರಾಜ್ಯ ಸರ್ಕಾರವು ಸರ್ಕಾರಿ ರಾಜ್ಯಪತ್ರದಲ್ಲಿ ಪ್ರಕಟಿಸಿದ ಆದೇಶದ ಮೂಲಕ, ತೊಂದರೆಗಳನ್ನು ನಿವಾರಿಸಲು ತನಗೆ ಅವಶ್ಯಕ ಅಥವಾ ಯುಕ್ತವೆಂದು ಕಂಡುಬರುವ ಮತ್ತು ಈ ಅಧಿನಿಯಮದ ಉದ್ದೇಶಗಳಿಗೆ ಅಸಂಗತವಾಗಿರದಂಥ ಉಪಬಂಧಗಳನ್ನು ರಚಿಸಬಹುದು.

**8. ನಿಯಮಗಳ ರಚನಾಧಿಕಾರ.–** (1) ರಾಜ್ಯ ಸರ್ಕಾರವು, ಈ ಅಧಿನಿಯಮದ ಉದ್ದೇಶಗಳನ್ನು ನೆರವೇರಿಸುವುದಕ್ಕಾಗಿ, ಸರ್ಕಾರಿ ರಾಜ್ಯಪತ್ರದಲ್ಲಿ ಅಧಿಸೂಚನೆಯ ಮೂಲಕ ಪೂರ್ವಾನ್ವಯವಾಗಿ ಅಥವಾ ಉತ್ತರಾನ್ವಯವಾಗಿ, ನಿಯಮಗಳನ್ನು ರಚಿಸಬಹುದು.

(2) ಈ ಅಧಿನಿಯಮದ ಅಡಿಯಲ್ಲಿ ರಚಿಸಿದ ಪ್ರತಿಯೊಂದು ನಿಯಮವನ್ನು, ಅದನ್ನು ರಚಿಸಿದ ತರುವಾಯ ಸಾಧ್ಯವಾದಷ್ಟು ಬೇಗನೇ ರಾಜ್ಯ ವಿಧಾನಮಂಡಲದ ಪ್ರತಿಯೊಂದು ಸದನದ ಮುಂದೆ, ಅದು ಒಂದು ಅಧಿವೇಶನ ಅಥವಾ ಎರಡು ನಿರಂತರ ಅಧಿವೇಶನಗಳಲ್ಲಿ ಅಡಕವಾಗಬಹುದಾದ ಒಟ್ಟು ಮೂವತ್ತು ದಿನಗಳವರೆಗೆ ಅಧಿವೇಶನದಲ್ಲಿರುವಾಗ, ಮಂಡಿಸತಕ್ಕದ್ದು ಮತ್ತು ಅದನ್ನು ಹಾಗೆ ಮಂಡಿಸಿದ ಅಧಿವೇಶನ ಅಥವಾ ನಿಕಟೋತ್ತರ ಅಧಿವೇಶನಗಳು ಮುಕ್ತಾಯವಾಗುವ ಮೊದಲು, ವಿಧಾನಮಂಡಲದ ಉಭಯಸದನಗಳು ನಿಯಮದಲ್ಲಿ ಯಾವುದೇ ಮಾರ್ಪಾಟು ಮಾಡಬೇಕೆಂದು ಒಪ್ಪಿದರೆ ಅಥವಾ ನಿಯಮವನ್ನು ರಚಿಸಬಾರದೆಂದು ತೀರ್ಮಾನಿಸಿದರೆ, ಆ ತರುವಾಯ ಅಂಥ ನಿಯಮವು ಸಂದರ್ಭಾನುಸಾರ ಹಾಗೆ ಮಾರ್ಪಾಟಾದ ರೀತಿಯಲ್ಲಿ ಮಾತ್ರ ಪರಿಣಾಮಕಾರಿಯಾಗಿರತಕ್ಕದ್ದು ಅಥವಾ ಪರಿಣಾಮಕಾರಿಯಾಗತಕ್ಕದ್ದಲ್ಲ. ಆದಾಗ್ಯೂ, ಅಂಥ ಮಾರ್ಪಾಟು ಅಥವಾ ರದ್ದತಿಯು ಆ ನಿಯಮದ ಅಡಿಯಲ್ಲಿ ಈ ಹಿಂದೆ ಮಾಡಿದ ಯಾವುದೇ ಕಾರ್ಯದ ಸಿಂಧುತ್ವಕ್ಕೆ ಬಾಧಕವಾಗತಕ್ಕದ್ದಲ್ಲ.

## ಉದ್ದೇಶಗಳು ಮತ್ತು ಕಾರಣಗಳ ಹೇಳಿಕೆ

ರಾಜ್ಯ ಸರ್ಕಾರ ಮತ್ತು ವೃತ್ತಿ ಶಿಕ್ಷಣ ಕೋರ್ಸುಗಳ ಶಿಕ್ಷಣ ನೀಡುತ್ತಿರುವ ಅನುದಾನಿತವಲ್ಲದ ಖಾಸಗಿ ಶಿಕ್ಷಣ ಸಂಸ್ಥೆಗಳ ನಡುವೆ ಮಾಡಿಕೊಳ್ಳಲು ಪ್ರಸ್ತಾವಿಸಲಾದ ಸಮ್ಮತಾಭಿಪ್ರಾಯದ ಒಪ್ಪಂದಕ್ಕೆ ಮಾನ್ಯತೆ ನೀಡುವುದಕ್ಕಾಗಿ ಮತ್ತು 2005 (6) ಎಸ್‌ಸಿಸಿ 537 ರಲ್ಲಿ ವರದಿಯಾದ ಪಿ.ಎ. ಇನಾಂದಾರ್ ಮತ್ತು ಇತರರು–ವಿರುದ್ಧ–ಮಹಾರಾಷ್ಟ್ರ ರಾಜ್ಯ – ಪ್ರಕರಣದಲ್ಲಿ ಸರ್ವೋಚ್ಚ ನ್ಯಾಯಾಲಯವು ನೀಡಿದ ತೀರ್ಪಿನಲ್ಲಿ ಉಪಬಂಧಿಸಲಾದಂಥ ಇತರ ವಿಷಯಗಳಿಗೆ ಉಪಬಂಧ ಕಲ್ಪಿಸುವುದಕ್ಕಾಗಿ ಒಂದು ವಿಧೇಯಕ.

ರಾಜ್ಯ ಸರ್ಕಾರವು ಕರ್ನಾಟಕ ನಿವಾಸಿ ವಿದ್ಯಾರ್ಥಿಗಳ ಮತ್ತು ಶೈಕ್ಷಣಿಕವಾಗಿ ಮತ್ತು ಸಾಮಾಜಿಕವಾಗಿ ಹಿಂದುಳಿದ ವರ್ಗಗಳಿಗೆ ಸೇರಿದ ವಿದ್ಯಾರ್ಥಿಗಳ ಹಿತರಕ್ಷಣೆಗಾಗಿ ಖಾಸಗಿ ಅನುದಾನಿತವಲ್ಲದ ವೃತ್ತಿ ಶಿಕ್ಷಣ ಸಂಸ್ಥೆಗಳೊಡನೆ 2008–09, 2009–10, 2010–11ನೇ ಶೈಕ್ಷಣಿಕ ವರ್ಷಗಳಿಗೆ

ಸಮ್ಮತಾಭಿಪ್ರಾಯದ ವ್ಯವಸ್ಥೆ ಅಥವಾ ಒಪ್ಪಂದ ಮಾಡಿಕೊಂಡಿರುವ ಹಿನ್ನೆಲೆಯಲ್ಲಿ ಮತ್ತು 2012–13ನೇ ಶೈಕ್ಷಣಿಕ ವರ್ಷಕ್ಕಾಗಿ ಸಮ್ಮತಾಭಿಪ್ರಾಯದ ವ್ಯವಸ್ಥೆ ಅಥವಾ ಒಪ್ಪಂದವನ್ನು ಮಾಡಿಕೊಳ್ಳಲು ಉದ್ದೇಶಿಸಿರುವ ಹಿನ್ನೆಲೆಯಲ್ಲಿ ಕರ್ನಾಟಕ ವೃತ್ತಿ ಶಿಕ್ಷಣ ಸಂಸ್ಥೆಗಳ (ಪ್ರವೇಶ ನಿಯಂತ್ರಣ ಮತ್ತು ಶುಲ್ಕ ನಿಗದಿ) ಅಧಿನಿಯಮ, 2006ನ್ನು 2012–13ನೇ ಶೈಕ್ಷಣಿಕ ವರ್ಷಕ್ಕೆ ಖಾಸಗಿ ಅನುದಾನಿತವಲ್ಲದ ಶಿಕ್ಷಣ ಸಂಸ್ಥೆಗಳಲ್ಲಿ ಪ್ರವೇಶ ಮತ್ತು ಶುಲ್ಕ ನಿಗದಿಗಾಗಿ ತಡೆಹಿಡಿಯುವುದು ಅವಶ್ಯವೆಂದು ಅಭಿಪ್ರಾಯಪಡಲಾಗಿದೆ.

ಆದ್ದರಿಂದ ಈ ವಿಧೇಯಕ.

**ಆರ್ಥಿಕ ಜ್ಞಾಪನ ಪತ್ರ**

ಪ್ರಸ್ತಾವಿತ ಶಾಸನಾತ್ಮಕ ಕ್ರಮವು ಯಾವುದೇ ಹೆಚ್ಚಿನ ವೆಚ್ಚವನ್ನು ಒಳಗೊಂಡಿರುವುದಿಲ್ಲ.

**ಪ್ರತ್ಯಾಯೋಜಿತ ಶಾಸನ ರಚನಾಧಿಕಾರದ ಕುರಿತು ಜ್ಞಾಪನ ಪತ್ರ**

**ಖಂಡ–8** ಈ ಅಧಿನಿಯಮದ ಉದ್ದೇಶಗಳನ್ನು ನೆರವೇರಿಸುವುದಕ್ಕಾಗಿ, ಪೂರ್ವಾನ್ವಯವಾಗಿ ಅಥವಾ ಉತ್ತರಾನ್ವಯವಾಗಿ ಪೂರ್ವ ಪ್ರಕಟಣೆಯ ತರುವಾಯ, ನಿಯಮಗಳನ್ನು ರಚಿಸಲು ರಾಜ್ಯ ಸರ್ಕಾರಕ್ಕೆ ಅಧಿಕಾರವನ್ನು ನೀಡುತ್ತದೆ.

ಪ್ರಸ್ತಾವಿತ ಶಾಸನ ರಚನಾಧಿಕಾರದ ಪ್ರತ್ಯಾಯೋಜನೆಯು ವಾಡಿಕೆಯ ಸ್ವರೂಪದ್ದಾಗಿದೆ.

**ಡಿ. ವಿ. ಸದಾನಂದ ಗೌಡ**
ಮುಖ್ಯಮಂತ್ರಿ

**ಪಿ. ಓಂಪ್ರಕಾಶ**
ಕಾರ್ಯದರ್ಶಿ
ಕರ್ನಾಟಕ ವಿಧಾನ ಸಭೆ

## KARNATAKA LEGISLATIVE ASSEMBLY

### THIRTEENTH LEGISLATIVE ASSEMBLY

### THIRTEENTH SESSION

# THE KARNATAKA PROFESSIONAL EDUCATIONAL INSTITUTIONS (REGULATION OF ADMISSION AND FIXATION OF FEE) (SPECIAL PROVISIONS) BILL, 2012

**(L.A. Bill No. 18 of 2012)**

A Bill to provide for recognition of the consensual arrangement or agreement proposed to be entered into between the State Government and the Private Unaided Educational Institutions imparting Professional Educational Courses and for other matters, as provided in the judgment of the Supreme Court of India in P.A. Inamdar and others Vs. State of Maharashtra reported in 2005(6) SCC 537.

Whereas the State Government, to protect the interest of the students of Karnataka domicile and students belonging to educationally and socially backward classes, have entered into a consensual arrangement or agreement with the Private Unaided Professional Educational Institutions for the years 2006-2007, 2007-2008 2008-09, 2009-10, 2010-11 and 2011-12 and has proposed to enter into a consensual arrangement or agreement for the year 2012-2013 and felt that the Karnataka Professional Educational Institutions (Regulation of Admission and Determination of Fee)

Act, 2006 (Karnataka Act 8 of 2006) be kept in abeyance for admission and fixation of fee in private unaided professional educational institutions for the academic year 2012-13 and for the purposes hereinafter appearing;

Be it enacted by the Karnataka State Legislature in the sixty third year of the Republic of India, as follows:-

**1. Short title, commencement and application**.- (1) This Act may be called the Karnataka Professional Educational Institutions (Regulation of Admission and Fixation of Fee) (Special Provisions) Act, 2012.

(2) It shall come into force at once.

(3) Notwithstanding anything contained in the Karnataka Professional Educational Institutions (Regulation of Admission and Determination of Fee) Act, 2006 (Karnataka Act 8 of 2006), admissions and fixation of fee in an un-aided Private Professional Educational Institution for the academic year 2012-13 shall be governed by the provisions of this Act.

**2. Definitions**.- In this Act, unless the context otherwise requires,-

(a) "**Common Entrance Test**" means the entrance test conducted for determination of merit of the candidates followed by centralized counseling for the purpose of admission to professional educational courses through a single window procedure;

(b) **"Common Entrance Test Cell"** means the agency called the Karnataka Examination Authority of the State Government which conducts the common entrance test;

(c) "**Consensual arrangement or agreement**" means any agreement that may be entered into between the State Government and association of unaided Private Professional Educational Institutions relating to admission and fixation of fee in professional courses;

(d) "**Institution**" means Professional Educational Institutions offering Professional Educational courses;

(e) "**One Man Regulatory Committee**" means the Committee constituted by the State Government under section 3;

(f) "**Professional Educational Courses**" means,-

(I) In Medical and Dental Institutions,-

(a) Bachelor of Medicine and Bachelor of Surgery; and

(b) Bachelor of Dental Surgery.

(II) In Engineering Institutions,-

(a) Bachelor of Engineering;

(b) Bachelor of Technology;

(c) Bachelor of Architecture.

(III) Post Graduate Degree and Diploma courses in Medical and Dental Sciences; and

(IV) such other courses as may be notified by the State Government

(g) "**Unaided institution**" means any privately managed professional educational institution, which is not receiving aid or grant-in-aid from the State Government.

**3. Constitution of One Man Regulatory Committee.-** There shall be a One-Man Regulatory Committee appointed by the State Government, who shall be a former Vice-Chancellor of any University in the State. The said One-Man Regulatory Committee shall oversee the admission to professional courses and the implementation of the consensual arrangement or agreement done in accordance to the provisions of this Act.

**4. Fixation of fee.-** Notwithstanding the fee fixed in respect of Professional Educational Institutions which are in force on the date of commencement of this Act, the State Government may, in accordance with the consensual

arrangement or agreement, by notification, fix the fee payable for admission to the Unaided Private Professional Educational Institutions. Different rates of fees may be fixed for different categories of students.

**5. Regulation of admission and seat matrix.-** (1) For effective implementation of the consensual arrangement or agreement, seats in a Private Unaided Professional Educational Institution shall be filled in the following manner, namely:-

(i) for the year 2012-13 such number of seats as may be agreed to by the Government under the consensual arrangement or agreement;

shall be filled through the Common Entrance Test Cell in accordance with the Karnataka Selection of Candidates for Admission to Government seats in Professional Educational Institutions Rules, 2006 as amended from time to time.

(ii) The remaining seats shall be filled through the Common Entrance Test conducted by the association of Private Professional Educational Institutions or the association of religious and linguistic minority institutions, as the case may be followed by centralized counseling, in a fair and transparent manner on the basis of merit determined subject to such rules as may be prescribed except otherwise specified in the consensual arrangement or agreement.

(2) Subject to reservation policy of the State Government and the consensual arrangement or agreement, the State Government may, by notification, publish the seat matrix to be filled by the Common Entrance Test Cell and the management, by different categories of students in respect of different categories of institutions.

**6. Invalidation of admissions made in violation of this Act.-** All admissions made in violation of the provisions of this Act or the consensual arrangement or agreement by any Private Unaided Professional Educational Institutions for the academic years 2012-13 whether made before or after commencement of this Act shall be invalid. In case of such violation, the State Government may direct the concerned university to cancel such admissions or affiliation of such institution as the case may be.

**7. Power to remove difficulties.-** If any difficulty arises in giving effect to the provisions of this Act, the State Government may, by order published in the official Gazette, make provisions not inconsistent with the provisions of this Act as appear it to be necessary or expedient for removing the difficulty.

**8. Power to make rules.-** (1) The State Government may, by notification, in the official Gazette, make rules prospectively or retrospectively for carrying out the purposes of this Act.

(2) Every rule made under this Act shall be laid as soon as may be after it is made before each House of the State Legislature while it is in session for a total period of thirty days which may be comprised in one session or in two or more successive sessions, and if, before the expiry of the session immediately following the session or the successive sessions aforesaid, both Houses agree in making any modification in the rule or both Houses agree that the rule should not be made, the rule shall thereafter have effect only in such modified form or be of no effect, as the case may be, so however, that any such modification or annulment shall be without prejudice to the validity of anything previously done under that rule.

## STATEMENT OF OBJECTS AND REASONS

A Bill to provide for recognition of the consensual agreement proposed to be entered into between the State Government and the Private Unaided Educational Institutions imparting Professional Educational Courses and for other matters, as provided in the judgment of the Supreme Court of India in P.A. Inamdar and others Vs. State of Maharashtra reported in 2005(6) SCC 537.

Whereas the State Government, to protect the interest of the students of Karnataka domicile and students belonging to educationally and socially backward classes, for the academic year 2008-09, 2009-10, and 2010-11 have entered into such consensual arrangement or agreement and has proposed to enter into consensual arrangement or

agreement for the year 2012-13 with the Private Unaided Professional Educational Institutions and felt necessary that the Karnataka Professional Educational Institutions (Regulation of Admission and Determination of Fee) Act, 2006 be kept in abeyance for the academic year 2012-13 in respect of admission and fixation of fee in a unaided private professional educational institutions..

Hence, the Bill.

**FINANCIAL MEMORANDUM**

There is no extra expenditure involved in the proposed legislative measure.

**MEMORANDUM REGARDING DELEGATED LEGISLATION**

| | |
|---|---|
| Clause 8 | Clause 8 empower the State Government to make rules to carry out the purposes of the Act. |

The proposed delegation of legislative power is normal in character.

**D.V. SADANANDA GOWDA**
Chief Minister

**P. OMPRAKASHA**
Secretary
Karnataka Legislative Assembly

# ವಿಶೇಷ ಪತ್ರಿಕೆ

| | | |
|---|---|---|
| ಭಾಗ – **IV-A** | ಬೆಂಗಳೂರು, ಶುಕ್ರವಾರ, ಮಾರ್ಚ್ ೩೦, ೨೦೧೨ (ಚೈತ್ರ ೧೦, ಶಕ ವರ್ಷ ೧೯೩೪) | ನಂ. ೨೪೪ |

**KARNATAKA LEGISLATIVE ASSEMBLY SECRETARIAT**

**NOTIFICATION**

**No. KLA/LGA/13/Bill/2012, Bangalore, Dated: 30.3.2012**

The following Bill was introduced in Legislative Assembly on 30.3.2012.

**ಕರ್ನಾಟಕ ವಿಧಾನ ಸಭೆ**

**ಹದಿಮೂರನೇ ವಿಧಾನ ಸಭೆ**

**ಹದಿಮೂರನೇ ಅಧಿವೇಶನ**

## ಅರ್ಕ ವಿಶ್ವವಿದ್ಯಾಲಯ ವಿಧೇಯಕ, 2012

**(2012ರ ವಿಧಾನ ಸಭೆಯ ವಿಧೇಯಕ ಸಂಖ್ಯೆ 13)**

ಕಲೆ, ವಿಜ್ಞಾನ, ವಾಣಿಜ್ಯ, ಕಾನೂನು, ಇಂಜಿನಿಯರಿಂಗ್, ನಗರ ಯೋಜನೆ, ವ್ಯವಸ್ಥಾಪನೆ, ಆತಿಥ್ಯ, ಸಂಗೀತ, ಭಾಷಾ ವಿಜ್ಞಾನ ಮತ್ತು ತತ್ಸಂಬಂಧಿ ವಲಯಗಳಲ್ಲಿ ಹಾಗೂ ಅವುಗಳಿಗೆ ಸಂಬಂಧಿಸಿದ ಅಥವಾ ಅವುಗಳಿಗೆ ಆನುಷಂಗಿಕವಾದ ವಿಷಯಗಳಲ್ಲಿ ವಿಶ್ವವಿದ್ಯಾಲಯದ ಶಿಕ್ಷಣದ ಪ್ರಗತಿಪರ ವಿಚಾರಗಳನ್ನು ಉತ್ತೇಜಿಸಲು ಮತ್ತು ಕೈಗೊಳ್ಳಲು ಖಾಸಗಿ ವಲಯದಲ್ಲಿ ಒಂದು ವಿಶ್ವವಿದ್ಯಾಲಯವನ್ನು ಕರ್ನಾಟಕ ರಾಜ್ಯದಲ್ಲಿ ಸ್ಥಾಪಿಸಿ ನಿಗಮಿತಗೊಳಿಸುವುದಕ್ಕಾಗಿ ಒಂದು ವಿಧೇಯಕ.

ಇಲ್ಲಿ ಇನ್ನು ಮುಂದೆ ಕಂಡುಬರುವ ಉದ್ದೇಶಗಳಿಗಾಗಿ ಕಲೆ, ವಿಜ್ಞಾನ, ವಾಣಿಜ್ಯ, ಕಾನೂನು, ಇಂಜಿನಿಯರಿಂಗ್, ನಗರ ಯೋಜನೆ, ವ್ಯವಸ್ಥಾಪನೆ, ಆತಿಥ್ಯ, ಸಂಗೀತ, ಭಾಷಾ ವಿಜ್ಞಾನ ಮತ್ತು ತತ್ಸಂಬಂಧಿ ವಲಯಗಳಲ್ಲಿ ಹಾಗೂ ಅವುಗಳಿಗೆ ಸಂಬಂಧಿಸಿದ ಅಥವಾ ಅವುಗಳಿಗೆ ಆನುಷಂಗಿಕವಾದ ವಿಷಯಗಳಲ್ಲಿ ವಿಶ್ವವಿದ್ಯಾಲಯದ ಶಿಕ್ಷಣದ ಪ್ರಗತಿಪರ ವಿಚಾರಗಳನ್ನು ಉತ್ತೇಜಿಸಲು ಮತ್ತು ಕೈಗೊಳ್ಳಲು ಖಾಸಗಿ ವಲಯದಲ್ಲಿ ಒಂದು ವಿಶ್ವವಿದ್ಯಾಲಯವನ್ನು ಕರ್ನಾಟಕ ರಾಜ್ಯದಲ್ಲಿ ಸ್ಥಾಪಿಸಿ ನಿಗಮಿತಗೊಳಿಸುವುದು ಯುಕ್ತವಾಗಿರುವುದರಿಂದ;

ಇದು ಭಾರತ ಗಣರಾಜ್ಯದ ಅರವತ್ತೂರನೇ ವರ್ಷದಲ್ಲಿ ಕರ್ನಾಟಕ ರಾಜ್ಯ ವಿಧಾನಮಂಡಲದಿಂದ ಈ ಮುಂದಿನಂತೆ ಅಧಿನಿಯಮಿತವಾಗಲಿ:–

## ಅಧ್ಯಾಯ – I

## ಪ್ರಾರಂಭಿಕ

1. **ಸಂಕ್ಷಿಪ್ತ ಹೆಸರು, ವ್ಯಾಪ್ತಿ ಮತ್ತು ಪ್ರಾರಂಭ.–** (1) ಈ ಅಧಿನಿಯಮವನ್ನು ಅರ್ಕ ವಿಶ್ವವಿದ್ಯಾಲಯ ಅಧಿನಿಯಮ, 2012 ಎಂದು ಕರೆಯತಕ್ಕದ್ದು.

(2) ಇದು ಇಡೀ ಕರ್ನಾಟಕ ರಾಜ್ಯಕ್ಕೆ ವ್ಯಾಪ್ತವಾಗತಕ್ಕದ್ದು.

(3) ಇದು ರಾಜ್ಯ ಸರ್ಕಾರವು ಸರ್ಕಾರಿ ರಾಜ್ಯಪತ್ರದಲ್ಲಿ ಅಧಿಸೂಚನೆಯ ಮೂಲಕ ಗೊತ್ತುಪಡಿಸಬಹುದಾದ ಅಂಥ ದಿನಾಂಕದಂದು ಜಾರಿಗೆ ಬರತಕ್ಕದ್ದು.

**2. ಪರಿಭಾಷೆಗಳು.– ಈ ಅಧಿನಿಯಮದಲ್ಲಿ, ಸಂದರ್ಭವು ಅನ್ಯಥಾ ಅಗತ್ಯಪಡಿಸಿದ ಹೊರತು,–**

(ಎ) "ಶೈಕ್ಷಣಿಕ ಪರಿಷತ್ತು (ಅಕೆಡೆಮಿಕ್ ಕೌನ್ಸಿಲ್)" ಎಂದರೆ, 25ನೇ ಪ್ರಕರಣದ ಅಡಿಯಲ್ಲಿ ಸ್ಥಾಪಿಸಲಾದ ವಿಶ್ವವಿದ್ಯಾಲಯದ ಶೈಕ್ಷಣಿಕ ಪರಿಷತ್ತು;

(ಬಿ) "ಕಾರ್ಯಸೂಚಿ ವಿಷಯಗಳು", ಎಂದರೆ, ಪರಿನಿಯಮಗಳಲ್ಲಿ ಹೆಸರಿಸಬಹುದಾದ ಮತ್ತು ಒಂದು ಸಭೆಯಲ್ಲಿ ಆ ವಿಷಯಗಳನ್ನು ಮತ್ತು ಕಲಾಪಗಳನ್ನು ಅನುಮೋದಿಸಬಹುದೆಂದು ತಮ್ಮ ಸಮ್ಮತಿ ಸೂಚಿಸಿ ಕುಲಾಧಿಪತಿಯವರು ಮುಂಚಿತವಾಗಿಯೇ ಲಿಖಿತ ಅನುಮೋದನೆಯನ್ನು ಕೊಟ್ಟಿದ್ದಾಗ ಮಾತ್ರವೇ ಸಂದರ್ಭಾನುಸಾರ ಪ್ರಬಂಧಕರ ಮಂಡಳಿ ಅಥವಾ ವ್ಯವಸ್ಥಾಪನಾ ಮಂಡಳಿ ಅಥವಾ ಯಾವುದೇ ಸಮಿತಿಯವರು ಕಾರ್ಯಸೂಚಿಯಲ್ಲಿ ಸೇರಿಸಬಹುದಾದ ಅಥವಾ ಸಭೆಯಲ್ಲಿ ಚರ್ಚೆಗೆ ತೆಗೆದುಕೊಂಡು ನಿರ್ಣಯವನ್ನು ಕೊಡಬಹುದಾದ ಎಲ್ಲಾ ವಿಷಯಗಳು ಮತ್ತು ಕಲಾಪಗಳು;

(ಸಿ) "ಪ್ರಬಂಧಕರ ಮಂಡಳಿ" ಎಂದರೆ, 23ನೇ ಪ್ರಕರಣದಲ್ಲಿ ನಿರ್ದಿಷ್ಟಪಡಿಸಿರುವ ವಿಶ್ವವಿದ್ಯಾಲಯದ ಪ್ರಬಂಧಕರ ಮಂಡಳಿ;

(ಡಿ) "ವ್ಯವಸ್ಥಾಪನಾ ಮಂಡಳಿ" ಎಂದರೆ, 24ನೇ ಪ್ರಕರಣದಲ್ಲಿ ನಿರ್ದಿಷ್ಟಪಡಿಸಿರುವ ವಿಶ್ವವಿದ್ಯಾಲಯದ ಆಡಳಿತ ಮಂಡಳಿ;

(ಇ) "ಕುಲಾಧಿಪತಿ", "ಕುಲಪತಿ", "ಸಹಕುಲಪತಿ" ಎಂದರೆ, ಅನುಕ್ರಮವಾಗಿ ವಿಶ್ವವಿದ್ಯಾಲಯದ ಕುಲಾಧಿಪತಿ, ಕುಲಪತಿ ಮತ್ತು ಸಹಕುಲಪತಿ;

(ಎಫ್) "ಕ್ಯಾಂಪಸ್" ಎಂದರೆ, ಅದು ಎಲ್ಲಾದರೂ ಇರಲಿ ವಿಶ್ವವಿದ್ಯಾಲಯವು ಸ್ಥಾಪಿಸಿದ, ನಿರ್ವಹಿಸುವ ಒಂದು ಕ್ಯಾಂಪಸ್;

(ಜಿ) "ಸಮಿತಿಗಳು" ಎಂದರೆ, ಈ ಅಧಿನಿಯಮದಡಿಯಲ್ಲಿ ರೂಪಿಸಲಾದ ಸಮಿತಿಗಳು ಅಥವಾ ಸಂದರ್ಭಾನುಸಾರವಾಗಿ ವಿಶ್ವವಿದ್ಯಾಲಯದ ವಿವಿಧ ಕಾರ್ಯಕರ್ತರು ರಚಿಸಿರುವ ಸಮಿತಿಗಳು ಮತ್ತು ಅದರಲ್ಲಿ ನಾಮನಿರ್ದೇಶನ ಸಮಿತಿ, ಹಣಕಾಸು ಸಮಿತಿ, ಮತ್ತು ಅಂಥ ಇತರ ಸಮಿತಿಗಳು ಒಳಗೊಳ್ಳುತ್ತವೆ;

(ಎಚ್) "ಘಟಕ ಕಾಲೇಜು" ಎಂದರೆ, ವಿಶ್ವವಿದ್ಯಾಲಯವು ಸ್ಥಾಪಿಸಿ ನಿರ್ವಹಿಸುತ್ತಿರುವ ಒಂದು ಕಾಲೇಜು ಅಥವಾ ಸಂಸ್ಥೆ;

(ಐ) "ದೂರಶಿಕ್ಷಣ" ಎಂದರೆ, ದೃಶ್ಯ ಸಂಪರ್ಕ, ಧ್ವನಿ ಸಂಪರ್ಕ, ಗಣಕಯಂತ್ರ, ಬಹುಮಾಧ್ಯಮ (ಮಲ್ಟಿ ಮಿಡಿಯ) ಪ್ರಸಾರ, ದೂರದರ್ಶನ ಪ್ರಸಾರ (ಟೆಲಿಕ್ಯಾಸ್ಟ್) ತಂತ್ರಜ್ಞಾನಗಳು ಮತ್ತು ಸಂಪರ್ಕಸಾಧನಗಳನ್ನು ಬಳಸಿಕೊಂಡು, ಒಂದು ತರಗತಿ, ಕಟ್ಟಡ ಅಥವಾ ನಿವೇಶನದಿಂದ ದೂರದಲ್ಲಿರುವ ಬೇರೊಂದು ತರಗತಿ, ಕಟ್ಟಡ ಅಥವಾ ನಿವೇಶನದಲ್ಲಿರುವವರಿಗೆ ಶಿಕ್ಷಣವನ್ನು ನೀಡುವ ಪ್ರಕ್ರಿಯೆ ಮತ್ತು ಇದು ಅಂಚೆ ಶಿಕ್ಷಣ, ವಿಚಾರಗೋಷ್ಠಿ, ಸಂಪರ್ಕ ಕಾರ್ಯಕ್ರಮ ಅಥವಾ ಅಂಥ ವಿಧಾನಗಳ ಯಾವುದೇ ಎರಡು ಅಥವಾ ಹೆಚ್ಚಿನ ಸಂಯೋಜನೆಗಳು ಮುಂತಾದವುಗಳನ್ನು ಒಳಗೊಳ್ಳುತ್ತದೆ;

(ಜೆ) "ದೂರ ಶಿಕ್ಷಣ ಸಮಿತಿ" ಎಂದರೆ, 27ನೇ ಪ್ರಕರಣದಲ್ಲಿ ನಿರ್ದಿಷ್ಟಪಡಿಸಿರುವ ವಿಶ್ವವಿದ್ಯಾಲಯದ ದೂರ ಶಿಕ್ಷಣ ಸಮಿತಿ;

(ಕೆ) "ಹಣಕಾಸು ಸಮಿತಿ" ಎಂದರೆ, 28ನೇ ಪ್ರಕರಣದಲ್ಲಿ ನಿರ್ದಿಷ್ಟಪಡಿಸಿರುವ ವಿಶ್ವವಿದ್ಯಾಲಯದ ಹಣಕಾಸು ಸಮಿತಿ;

(ಎಲ್) "ಸರ್ಕಾರ" ಎಂದರೆ, ಕರ್ನಾಟಕ ಸರ್ಕಾರ;

(ಎಂ) "ರಾಷ್ಟ್ರೀಯ ಅಧಿಮಾನ್ಯತಾ ಸಂಸ್ಥೆಗಳು" ಎಂದರೆ, ವಿಶ್ವವಿದ್ಯಾಲಯ ಅನುದಾನ ಆಯೋಗ, ಅಖಿಲ ಭಾರತ ತಾಂತ್ರಿಕ ವಿದ್ಯಾಪರಿಷತ್ತು, ಭಾರತೀಯ ವೈದ್ಯಕೀಯ ಪರಿಷತ್ತು, ಭಾರತೀಯ ಔಷಧ ವಿಜ್ಞಾನ ಪರಿಷತ್ತು, ಭಾರತೀಯ ಕೃಷಿ ಸಂಶೋಧನಾ

ಪರಿಷತ್ತು, ರಾಷ್ಟ್ರೀಯ ಮೌಲ್ಯಮಾಪನ ಮತ್ತು ಅಧಿಮಾನ್ಯತಾ ಪರಿಷತ್ತು, ರಾಷ್ಟ್ರೀಯ ಬೋಧಕ ಶಿಕ್ಷಣ ಪರಿಷತ್ತು, ದೂರಶಿಕ್ಷಣ ಪರಿಷತ್ತು, ವೈಜ್ಞಾನಿಕ ಮತ್ತು ಕೈಗಾರಿಕಾ ಸಂಶೋಧನಾ ಪರಿಷತ್ತು ಮುಂತಾದ, ಉನ್ನತ ಶಿಕ್ಷಣದಲ್ಲಿ ಗುಣಮಟ್ಟದ ಶಿಕ್ಷಣ ದೊರೆಯುವಂತೆ ನೋಡಿಕೊಳ್ಳುವುದಕ್ಕಾಗಿ ಗುಣಮಟ್ಟಗಳು ಮತ್ತು ಷರತ್ತುಗಳನ್ನು ವಿಧಿಸುವುದಕ್ಕಾಗಿ, ಕೇಂದ್ರ ಸರ್ಕಾರವು ಸ್ಥಾಪಿಸಿರುವ ಒಂದು ಸಂಸ್ಥೆ ಮತ್ತು ಇದರಲ್ಲಿ ಸರ್ಕಾರವೂ ಸೇರಿರುತ್ತದೆ;

(ಎನ್) "ನಿಯಮಿಸಲಾದುದು" ಎಂದರೆ, ಈ ಅಧಿನಿಯಮದಡಿಯಲ್ಲಿ ಸರ್ಕಾರವು ರಚಿಸಲಾದ ನಿಯಮಗಳ ಮೂಲಕ ನಿಯಮಿಸಲಾದುದು;

(ಒ) "ಒಂದು ಘಟಕ ಕಾಲೇಜಿಗೆ ಸಂಬಂಧಪಟ್ಟಂತೆ ಪ್ರಾಂಶುಪಾಲರು" ಎಂದರೆ, ಘಟಕ ಕಾಲೇಜಿನ ಮುಖ್ಯಸ್ಥರು ಮತ್ತು ಪ್ರಾಂಶುಪಾಲರು ಇಲ್ಲದಿದ್ದಲ್ಲಿ ಅಥವಾ ನೇಮಕವಾದ ಪ್ರಾಂಶುಪಾಲರ ಗೈರುಹಾಜರಿಯಲ್ಲಿ, ಪ್ರಾಂಶುಪಾಲರಾಗಿ ಕರ್ತವ್ಯ ನಿರ್ವಹಿಸಲು ತಾತ್ಕಾಲಿಕವಾಗಿ ನೇಮಕಗೊಂಡಿರುವ ಉಪಪ್ರಾಂಶುಪಾಲರು ಅಥವಾ ಯಾವುದೇ ಇತರ ವ್ಯಕ್ತಿಯೂ ಇದರಲ್ಲಿ ಒಳಗೊಳ್ಳುತ್ತಾರೆ;

(ಪಿ) "ಕುಲಸಚಿವರು" ಎಂದರೆ, ವಿಶ್ವವಿದ್ಯಾಲಯದ ಕುಲಸಚಿವರು;

(ಕ್ಯೂ) "ಪ್ರಾದೇಶಿಕ ಕೇಂದ್ರ" ಎಂದರೆ, ಯಾವುದೇ ಪ್ರದೇಶದಲ್ಲಿನ ಅಧ್ಯಯನ ಕೇಂದ್ರಗಳ ಕಾರ್ಯವನ್ನು ಸಮನ್ವಯಗೊಳಿಸುವ ಮತ್ತು ಮೇಲ್ವಿಚಾರಣೆ ಮಾಡುವ ಉದ್ದೇಶಕ್ಕಾಗಿ ಮತ್ತು ಅಂಥ ಕೇಂದ್ರಕ್ಕೆ ವ್ಯವಸ್ಥಾಪನಾ ಮಂಡಳಿಯು ವಹಿಸಿಕೊಡಬಹುದಾದ ಅಂಥ ಇತರ ಕರ್ತವ್ಯಗಳನ್ನು ನೆರವೇರಿಸುವುದಕ್ಕಾಗಿ ವಿಶ್ವವಿದ್ಯಾಲಯವು ಸ್ಥಾಪಿಸಿದ ಅಥವಾ ನಿರ್ವಹಿಸಿಕೊಂಡುಬರುವ ಒಂದು ಕೇಂದ್ರ;

(ಆರ್) ಈ ಅಧಿನಿಯಮಕ್ಕೆ ಸಂಬಂಧಿಸಿದಂತೆ "ಪ್ರಾಯೋಜಕ ಪ್ರಾಧಿಕಾರ" ಅಥವಾ "ಪ್ರಾಯೋಜಕ ಸಂಸ್ಥೆ" ಎಂದರೆ, ನ್ಯಾಸ;

(ಎಸ್) "ರಾಜ್ಯ" ಎಂದರೆ, ಕರ್ನಾಟಕ ರಾಜ್ಯ;

(ಟಿ) "ಪರಿನಿಯಮಗಳು" ಮತ್ತು "ವಿನಿಯಮಗಳು" ಎಂದರೆ, ಈ ಅಧಿನಿಯಮದ ಅಡಿಯಲ್ಲಿ ರಚಿಸಿದ ಅನುಕ್ರಮವಾಗಿ ವಿಶ್ವವಿದ್ಯಾಲಯದ ಪರಿನಿಯಮಗಳು ಮತ್ತು ವಿನಿಯಮಗಳು;

(ಯು) "ಅಧ್ಯಯನ ಕೇಂದ್ರ" ಎಂದರೆ, ದೂರ ಶಿಕ್ಷಣದ ಸಂದರ್ಭದಲ್ಲಿ ವಿದ್ಯಾರ್ಥಿಗಳಿಗೆ ಅಗತ್ಯವಾದ ಬುದ್ಧಿವಾದ, ಸಲಹೆಗಳನ್ನು ನೀಡುವ ಅಥವಾ ಇತರ ಯಾವುದೇ ನೆರವನ್ನು ನೀಡುವ ಉದ್ದೇಶಕ್ಕಾಗಿ ವಿಶ್ವವಿದ್ಯಾಲಯವು ಸ್ಥಾಪಿಸಿದ ಮತ್ತು ನಿರ್ವಹಿಸಿಕೊಂಡುಬಂದ ಒಂದು ಕೇಂದ್ರ;

(ವಿ) "ಅಧ್ಯಾಪಕರು" ಎಂದರೆ, ಒಬ್ಬ ಪ್ರಾಧ್ಯಾಪಕರು, ಸಹಪ್ರಾಧ್ಯಾಪಕರು, ಸಹಾಯಕ ಪ್ರಾಧ್ಯಾಪಕರು, ಅಥವಾ ವಿಶ್ವವಿದ್ಯಾಲಯದಲ್ಲಿ ಅಥವಾ ಒಂದು ಘಟಕ ಕಾಲೇಜಿನಲ್ಲಿ ಬೋಧಿಸುವುದಕ್ಕೆ ಅಥವಾ ಸಂಶೋಧನೆ ನಡೆಸುವುದಕ್ಕೆ ಅಥವಾ ಸಂಶೋಧನೆಗೆ ಮಾರ್ಗದರ್ಶನ ನೀಡುವುದಕ್ಕೆ ನೇಮಕವಾದ ಅಂಥ ಇತರ ವ್ಯಕ್ತಿ ಎಂದರ್ಥ ಮತ್ತು ವಿಶ್ವವಿದ್ಯಾಲಯ ಅನುದಾನ ಆಯೋಗವು ನಿಯಮಿಸಿದ ಗುಣಮಟ್ಟಗಳಿಗೆ ಅನುಸಾರವಾಗಿ ಇರುವ ಘಟಕ ಕಾಲೇಜಿನ ಪ್ರಾಂಶುಪಾಲರು ಇದರಲ್ಲಿ ಒಳಗೊಳ್ಳುತ್ತಾರೆ;

(ಡಬ್ಲ್ಯೂ) **"ನ್ಯಾಸ"** ಎಂದರೆ ಅರ್ಕ ಶೈಕ್ಷಣಿಕ ಮತ್ತು ಸಾಂಸ್ಕೃತಿಕ ನ್ಯಾಸ, ಬೆಂಗಳೂರು;

(ಎಕ್ಸ್) "ವಿಶ್ವವಿದ್ಯಾಲಯ ಅನುದಾನಗಳ ಆಯೋಗ" ಎಂದರೆ, ವಿಶ್ವವಿದ್ಯಾಲಯ ಅನುದಾನಗಳ ಆಯೋಗ ಅಧಿನಿಯಮ, 1956ರ (1956ರ ಕೇಂದ್ರ ಅಧಿನಿಯಮ 3) 4ನೇ ಪ್ರಕರಣದ ಅಡಿಯಲ್ಲಿ ಸ್ಥಾಪಿತವಾದ ಆಯೋಗ;

(ವೈ) "ವಿಶ್ವವಿದ್ಯಾಲಯ" ಎಂದರೆ, ಈ ಅಧಿನಿಯಮದಡಿಯಲ್ಲಿ ಸ್ಥಾಪಿಸಿ ನಿಗಮಿತಗೊಳಿಸಲಾದ ಅರ್ಕ ವಿಶ್ವವಿದ್ಯಾಲಯ;

(ಜೆಡ್) "ಸಂದರ್ಶಕರು" ಎಂದರೆ, 13ನೇ ಪ್ರಕರಣದಲ್ಲಿ ನಿರ್ದಿಷ್ಟಪಡಿಸಿದ ವಿಶ್ವವಿದ್ಯಾಲಯದ ಸಂದರ್ಶಕರು.

## ಅಧ್ಯಾಯ– II

## ವಿಶ್ವವಿದ್ಯಾಲಯ ಮತ್ತು ಪ್ರಾಯೋಜಕ ಸಂಸ್ಥೆ

**3. ವಿಶ್ವವಿದ್ಯಾಲಯದ ಸ್ಥಾಪನೆಗೆ ಪ್ರಸ್ತಾವ.–** (1) ಈ ಅಧಿನಿಯಮದ ಉಪಬಂಧಗಳಿಗೆ ಒಳಪಟ್ಟು ಮತ್ತು ಅದಕ್ಕನುಸಾರವಾಗಿ ವಿಶ್ವವಿದ್ಯಾಲಯವನ್ನು ಸ್ಥಾಪಿಸುವ ಹಕ್ಕನ್ನು ನ್ಯಾಸವು ಹೊಂದಿರತಕ್ಕದ್ದು.

(2) ನ್ಯಾಸವು ರಾಜ್ಯ ಸರ್ಕಾರಕ್ಕೆ ವಿಶ್ವವಿದ್ಯಾಲಯವನ್ನು ಸ್ಥಾಪಿಸುವ ಪ್ರಸ್ತಾವವನ್ನು ಸಲ್ಲಿಸತಕ್ಕದ್ದು.

(3) ನ್ಯಾಸವು ಈ ಮುಂದಿನ ವಿವರಗಳನ್ನು ಒಳಗೊಂಡಿರತಕ್ಕದ್ದು, ಎಂದರೆ:–

(i) ನ್ಯಾಸದ ವಿವರಗಳೊಂದಿಗೆ ವಿಶ್ವವಿದ್ಯಾಲಯದ ಧ್ಯೇಯೋದ್ದೇಶಗಳು;

(ii) ವಿಶ್ವವಿದ್ಯಾಲಯದ ವ್ಯಾಪ್ತಿ ಮತ್ತು ಸ್ಥಾನಮಾನ ಹಾಗೂ ಭೂಮಿಯ ಲಭ್ಯತೆ;

(iii) ಪ್ರಾರಂಭದ ದಿನಾಂಕದಿಂದ ನಿಕಟ ಐದು ಶೈಕ್ಷಣಿಕ ವರ್ಷಗಳ ಅವಧಿಯಲ್ಲಿ ವಿಶ್ವವಿದ್ಯಾಲಯವು ಕೈಗೊಳ್ಳಬೇಕೆಂದಿರುವ ಅಧ್ಯಯನ ಮತ್ತು ಸಂಶೋಧನಾ ಕಾರ್ಯಕ್ರಮಗಳ ಸ್ವರೂಪ ಮತ್ತು ಬಗೆಗಳು;

(iv) ಪ್ರಾರಂಭಿಸಬೇಕೆಂದು ಪ್ರಸ್ತಾಪಿಸಿರುವ ವ್ಯಾಸಂಗ ವಿಭಾಗಗಳು (ಫ್ಯಾಕಲ್ಟಿಗಳು), ಅಧ್ಯಯನ ಕ್ರಮಗಳು ಮತ್ತು ಸಂಶೋಧನೆಗಳ ಸ್ವರೂಪ;

(v) ಕಟ್ಟಡಗಳು, ಸಲಕರಣೆಗಳು ಮತ್ತು ರಚನಾ ಸೌಕರ್ಯಗಳನ್ನು ಒದಗಿಸುವಂಥ ಕ್ಯಾಂಪಸ್ ಅಭಿವೃದ್ಧಿ;

(vi) ಪ್ರಾರಂಭದ ದಿನಾಂಕದ ನಿಕಟ ಐದು ಶೈಕ್ಷಣಿಕ ವರ್ಷಗಳ ಅವಧಿಗಾಗಿ ಬಂಡವಾಳ ವೆಚ್ಚದ ಹಂತಗಳು;

(vii) ಬಾಬುವಾರು ಆವರ್ತಕ ವೆಚ್ಚ, ಆರ್ಥಿಕ ಮೂಲಗಳು ಮತ್ತು ಪ್ರತಿಯೊಬ್ಬ ವಿದ್ಯಾರ್ಥಿಗೆ ತಗಲುವ ಅಂದಾಜು ವೆಚ್ಚ;

(viii) ಸಂಪನ್ಮೂಲ ಸಂಗ್ರಹಣೆಗಾಗಿ ಯೋಜನೆ ಮತ್ತು ಅದಕ್ಕೆ ಬಂಡವಾಳದಿಂದ ತಗಲುವ ವೆಚ್ಚ ಹಾಗೂ ಪ್ರತಿಯೊಂದು ಮೂಲಕ್ಕೂ ಮರು ಸಂದಾಯ ಮಾಡುವ ರೀತಿ;

(ix) ವಿದ್ಯಾರ್ಥಿಗಳಿಂದ ಶುಲ್ಕ ವಸೂಲು ಮಾಡಿ ಆಂತರಿಕವಾಗಿ ನಿಧಿ ಸಂಗ್ರಹಿಸುವ ಯೋಜನೆ, ಸಲಹಾ ಸೇವೆ ಮತ್ತು ವಿಶ್ವವಿದ್ಯಾಲಯದ ಧ್ಯೇಯೋದ್ದೇಶಗಳಿಗೆ ಸಂಬಂಧಿಸಿದ ಇತರ ಚಟುವಟಿಕೆಗಳಿಂದ ನಿರೀಕ್ಷಿತ ವರಮಾನಗಳು ಮತ್ತು ಇತರ ನಿರೀಕ್ಷಿತ ವರಮಾನಗಳು;

(x) ಘಟಕವೊಂದಕ್ಕೆ ತಗಲುವ ವೆಚ್ಚದ ವಿವರಗಳು, ಆರ್ಥಿಕವಾಗಿ ದುರ್ಬಲವಾದ ವರ್ಗಗಳಿಗೆ ಸೇರಿದ ವಿದ್ಯಾರ್ಥಿಗಳಿಗೆ ಶುಲ್ಕ, ಉಚಿತ ಶಿಕ್ಷಣ (ಫ್ರೀಶಿಪ್) ಮತ್ತು ವಿದ್ಯಾರ್ಥಿ ವೇತನದಲ್ಲಿ ನೀಡುವ ರಿಯಾಯಿತಿ ಅಥವಾ ವಿನಾಯತಿಯ ಪರಿಮಿತಿಯ ವಿವರಗಳನ್ನು ಮತ್ತು ಅನಿವಾಸಿ ಭಾರತೀಯರು ಅಥವಾ ಭಾರತೀಯ ಮೂಲದ ವ್ಯಕ್ತಿಗಳಿಗೆ ಅಥವಾ ಅನಿವಾಸಿ ಭಾರತೀಯರು ಅಥವಾ ಭಾರತೀಯ ಮೂಲದ ವ್ಯಕ್ತಿಗಳು ಪ್ರಾಯೋಜಿಸಿದ ವಿದ್ಯಾರ್ಥಿಗಳಿಗೆ ಮತ್ತು ಭಾರತವನ್ನುಳಿದು ಇತರ ರಾಷ್ಟ್ರಗಳ ವಿದ್ಯಾರ್ಥಿಗಳಿಗೆ ವಿಧಿಸತಕ್ಕ ಶುಲ್ಕದ ದರಗಳು ಬೇರೆ ಬೇರೆ ಇದ್ದಲ್ಲಿ ಅವುಗಳನ್ನು ಸೂಚಿಸುವ ಶುಲ್ಕ ರಚನೆಯ ವಿವರಗಳು;

(xi) ಸಂಬಂಧಪಟ್ಟ ವಿದ್ಯಾ ವಿಭಾಗದಲ್ಲಿ ಎಷ್ಟು ವರ್ಷಗಳ ಅನುಭವ ಮತ್ತು ಪರಿಣಿತಿಯನ್ನು ನ್ಯಾಸವು ದೊರಕಿಸಿಕೊಡಲಿದೆ ಹಾಗೂ ಅದರ ಹಣಕಾಸಿನ ಸಂಪನ್ಮೂಲಗಳು;

(xii) ವಿಶ್ವವಿದ್ಯಾಲಯದಲ್ಲಿರುವ ಅಧ್ಯಯನ ಕ್ರಮಗಳಿಗೆ ವಿದ್ಯಾರ್ಥಿಗಳನ್ನು ಆಯ್ಕೆ ಮಾಡುವುದಕ್ಕಾಗಿ ಇರುವ ವ್ಯವಸ್ಥೆ;

(xiii) ವಿಶ್ವವಿದ್ಯಾಲಯವು ಸ್ಥಾಪನೆಯಾಗುವುದಕ್ಕೆ ಮೊದಲು ನೆರವೇರಿಸಬೇಕೆಂದು ರಾಜ್ಯ ಸರ್ಕಾರವು ಅಗತ್ಯಪಡಿಸಬಹುದಾದ ಅಂಥ ಇತರ ಷರತ್ತುಗಳ ನೆರವೇರಿಕೆಯ ಹಂತ.

(4) ಸ್ವೀಕರಿಸಿದ ಪ್ರಸ್ತಾವಗಳನ್ನು ಪರೀಕ್ಷಿಸಲು ರಾಜ್ಯ ಸರ್ಕಾರವು, ಕರ್ನಾಟಕ ರಾಜ್ಯ ಉನ್ನತ ಶಿಕ್ಷಣ ಪರಿಷತ್ತಿನ ಪದನಿಮಿತ್ತ ಸದಸ್ಯರಾದ ಮೂರು ಸದಸ್ಯರುಗಳನ್ನು ಒಳಗೊಂಡ ಒಂದು ಪರಿಶೋಧನಾ ಸಮಿತಿಯನ್ನು ರಚಿಸತಕ್ಕದ್ದು ಮತ್ತು ಅದು ರಾಜ್ಯ ಸರ್ಕಾರಕ್ಕೆ ಶಿಫಾರಸ್ಸನ್ನು ಮಾಡತಕ್ಕದ್ದು.

**4. ವಿಶ್ವವಿದ್ಯಾಲಯದ ಸ್ಥಾಪನೆ.–** (1) ರಾಜ್ಯ ಸರ್ಕಾರವು, ಪರಿಶೋಧನಾ ಸಮಿತಿಯು ಮಾಡಿದ ಶಿಫಾರಸ್ಸುಗಳನ್ನು ಪರಿಶೀಲಿಸಿದ ತರುವಾಯ ಮತ್ತು ತಾನು ಅವಶ್ಯವೆಂದು ಭಾವಿಸುವಂಥ ವಿಚಾರಣೆಯನ್ನು ನಡೆಸಿದ ತರುವಾಯ, 3ನೇ ಪ್ರಕರಣದ (3)ನೇ ಉಪಪ್ರಕರಣದಲ್ಲಿ ಅಗತ್ಯಪಡಿಸಲಾದಂತೆ ನ್ಯಾಸವು ಒದಗಿಸಿದ ವಿವರಗಳ ಆಧಾರದ ಮೇಲೆ, ಅದು ಸಾಕಷ್ಟು ಮೂಲ ಸೌಕರ್ಯಗಳನ್ನು ಮತ್ತು ಐವತ್ತು ಎಕರೆಗಳಿಗಿಂತ ಕಡಿಮೆಯಲ್ಲದಷ್ಟು ಭೂಮಿಯನ್ನು ಹೊಂದಿದ್ದು, ಒಂದು ವಿಶ್ವವಿದ್ಯಾಲಯವನ್ನು ನಡೆಸಲು ನ್ಯಾಸವು ಸಮರ್ಥವಾಗಿದೆಯೆಂದು ಅದು ಮನಗಂಡರೆ, ಅದು 47ನೇ ಪ್ರಕರಣದಲ್ಲಿ ನಿರ್ದಿಷ್ಟಪಡಿಸಿರುವ ಶಾಶ್ವತ ಶಾಸನಬದ್ಧ ದತ್ತಿ ನಿಧಿಯನ್ನು ಸ್ಥಾಪಿಸಬೇಕೆಂದು ಪ್ರತಿಷ್ಠಾನಕ್ಕೆ ನಿರ್ದೇಶನ ನೀಡಬಹುದು.

(2) ಶಾಶ್ವತ ಶಾಸನಬದ್ಧ ದತ್ತಿ ನಿಧಿಯ ಸ್ಥಾಪನೆಯ ತರುವಾಯ, ಸರ್ಕಾರವು, ಸರ್ಕಾರಿ ರಾಜ್ಯಪತ್ರದಲ್ಲಿ ಅಧಿಸೂಚನೆಯ ಮೂಲಕ, "ಅರ್ಕ ವಿಶ್ವವಿದ್ಯಾಲಯ" ಎಂಬ ಹೆಸರಿನ ಒಂದು ವಿಶ್ವವಿದ್ಯಾಲಯವನ್ನು ರಾಜ್ಯದಲ್ಲಿ ಸ್ಥಾಪಿಸುವುದಕ್ಕೆ ಮಂಜೂರಾತಿಯನ್ನು ನೀಡಬಹುದು.

(3) ವಿಶ್ವವಿದ್ಯಾಲಯದ ಕೇಂದ್ರಕಾರ್ಯಸ್ಥಾನವು ಬೆಂಗಳೂರಿನಲ್ಲಿ ಇರತಕ್ಕದ್ದು. ವಿಶ್ವವಿದ್ಯಾಲಯವು ತನ್ನ ಕ್ಯಾಂಪಸ್ಸುಗಳನ್ನು ಅಥವಾ ಪ್ರಾದೇಶಿಕ ಕೇಂದ್ರಗಳನ್ನು, ಅಧ್ಯಯನ ಕೇಂದ್ರಗಳನ್ನು ಕರ್ನಾಟಕದ ಯಾವುದೇ ಭಾಗದಲ್ಲಿ ಹೊಂದಿರತಕ್ಕದ್ದು ಮತ್ತು ಆ ಬಗ್ಗೆ ರಾಜ್ಯ ಸರ್ಕಾರದ ಪೂರ್ವಾನುಮತಿಯನ್ನು ಪಡೆದುಕೊಳ್ಳುವುದಕ್ಕೊಳಪಟ್ಟು ಹಾಗೂ ವಿಶ್ವವಿದ್ಯಾಲಯದ ಅನುದಾನ ಆಯೋಗದ ಗುಣಮಟ್ಟಗಳಿಗನುಸಾರವಾಗಿ ಹೊಂದಿರತಕ್ಕದ್ದು.

(4) ಮೊದಲ ಕುಲಾಧಿಪತಿಯವರು, ಮೊದಲ ಕುಲಪತಿಯವರು, ಪ್ರಬಂಧಕ ಮಂಡಳಿಯ ಮೊದಲ ಸದಸ್ಯರುಗಳು, ವ್ಯವಸ್ಥಾಪನಾ ಮಂಡಳಿಯ ಹಾಗೂ ಶೈಕ್ಷಣಿಕ ಪರಿಷತ್ತಿನ ಮೊದಲ ಸದಸ್ಯರುಗಳು ಮತ್ತು ಇನ್ನು ಮುಂದೆ, ಅಂಥ ಅಧಿಕಾರಿಗಳು ಅಥವಾ ಸದಸ್ಯರುಗಳಾಗಬಹುದಾದಂಥ ಎಲ್ಲಾ ವ್ಯಕ್ತಿಗಳು, ಅಂಥ ಪದ ಅಥವಾ ಸದಸ್ಯತ್ವವನ್ನು ಹೊಂದಿರುವುದು ಮುಂದುವರೆಯುವವರೆಗೆ, ಒಂದು ನಿಗಮಿತ ನಿಕಾಯವನ್ನು ರಚಿಸತಕ್ಕದ್ದು. ಮತ್ತು ಅದು ವಿಶ್ವವಿದ್ಯಾಲಯದ ಹೆಸರಿನಲ್ಲಿ ದಾವೆ ಹೂಡಬಹುದು ಮತ್ತು ದಾವೆಗೊಳಗಾಗಬಹುದು.

(5) (2)ನೇ ಉಪಪ್ರಕರಣದ ಅಡಿಯಲ್ಲಿ ವಿಶ್ವವಿದ್ಯಾಲಯವು ಸ್ಥಾಪನೆಗೆ ಮಂಜೂರಾತಿಯಾದ ಮೇಲೆ, ವಿಶ್ವವಿದ್ಯಾಲಯದ ಉದ್ದೇಶಕ್ಕಾಗಿ, ನ್ಯಾಸವು ಆರ್ಜಿಸಿದ, ಸೃಜಿಸಿದ, ಏರ್ಪಾಟು ಮಾಡಿಕೊಂಡ ಅಥವಾ ಕಟ್ಟಲ್ಪಟ್ಟ ಭೂಮಿ ಮತ್ತು ಇತರ ಸ್ಥಿರ ಮತ್ತು ಚರ ಸ್ವತ್ತು, ವಿಶ್ವವಿದ್ಯಾಲಯದಲ್ಲಿ ನಿಹಿತವಾಗಿರತಕ್ಕದ್ದು.

(6) ವಿಶ್ವವಿದ್ಯಾಲಯವು ಹೂಡಿದ ಅಥವಾ ಅದರ ವಿರುದ್ಧ ಹೂಡಲಾದ ಎಲ್ಲಾ ದಾವೆಗಳಲ್ಲಿ ಮತ್ತು ಇತರ ಕಾನೂನು ವ್ಯವಹರಣೆಗಳಲ್ಲಿ ವಾದ ಪತ್ರಗಳಿಗೆ ಕುಲಸಚಿವರು ಸಹಿ ಮಾಡಿ ಸತ್ಯಾಪನೆ ಮಾಡತಕ್ಕದ್ದು ಮತ್ತು ಅಂಥ ದಾವೆಗಳಲ್ಲಿನ ಮತ್ತು ವ್ಯವಹರಣೆಗಳಲ್ಲಿನ ಎಲ್ಲಾ ಆದೇಶಿಕೆಗಳನ್ನು ಕುಲಸಚಿವರಿಗೆ ನೀಡತಕ್ಕದ್ದು ಮತ್ತು ಅವರಿಗೆ ಜಾರಿ ಮಾಡತಕ್ಕದ್ದು.

(7) ವಿಶ್ವವಿದ್ಯಾಲಯದಲ್ಲಿನ ಭೂಮಿ, ಕಟ್ಟಡ ಮತ್ತು ಇತರ ಸ್ವತ್ತುಗಳನ್ನು ವಿಶ್ವವಿದ್ಯಾಲಯದ ಉದ್ದೇಶಗಳಿಗೆ ಆನುಷಂಗಿಕವಾಗಿರುವುದನ್ನು ಹೊರತುಪಡಿಸಿ ಇತರ ಯಾವುದೇ ಉದ್ದೇಶಕ್ಕಾಗಿ ಬಳಸತಕ್ಕದ್ದಲ್ಲ.

**5. ಅನುದಾನಗಳು ಮತ್ತು ಹಣಕಾಸು ನೆರವು.–** ವಿಶ್ವವಿದ್ಯಾಲಯವು ಸ್ವಂತ ಧನಮೂಲ ಉಳ್ಳದ್ದಾಗಿರತಕ್ಕದ್ದು ಮತ್ತು ರಾಜ್ಯದಿಂದ ಅಥವಾ ರಾಜ್ಯದ ಒಡೆತನದಲ್ಲಿರುವ ಅಥವಾ ನಿಯಂತ್ರಣದಲ್ಲಿರುವ ಯಾವುದೇ ಇತರ ಸಂಸ್ಥೆ ಅಥವಾ ನಿಗಮದಿಂದ ಯಾವುದೇ ನಿರ್ವಹಣಾ ಸಹಾಯ ಅನುದಾನ ಅಥವಾ ಯಾವುದೇ ಹಣಕಾಸು ನೆರವನ್ನು ಹಕ್ಕಿನಿಂದ ಕೇಳತಕ್ಕದ್ದಲ್ಲ ಅಥವಾ ಅದನ್ನು ಪಡೆಯಲು ಹಕ್ಕನ್ನು ಹೊಂದಿರತಕ್ಕದ್ದಲ್ಲ:

ಪರಂತು, ರಾಜ್ಯವು,–

(ಎ) ಇತರ ರಾಜ್ಯ ಸರ್ಕಾರದ ಸಂಘಟನೆಗಳಿಗೆ ಹಣಕಾಸು ನೆರವನ್ನು ಒದಗಿಸುತ್ತಿರುವಂಥದ್ದೇ ಸಂಶೋಧನೆ, ಅಭಿವೃದ್ಧಿ ಮತ್ತಿತರ ಚಟುವಟಿಕೆಗಳಿಗಾಗಿ; ಅಥವಾ

(ಬಿ) ಸರ್ಕಾರದಿಂದ ನೆರವನ್ನು ಪಡೆಯುವ ಯಾವುದೇ ನಿರ್ದಿಷ್ಟ ಸಂಶೋಧನೆ ಅಥವಾ ಕಾರ್ಯಕ್ರಮಗಳಿಗಾಗಿ; ಮತ್ತು

(ಸಿ) ರಾಜ್ಯ ಕಾರ್ಯನೀತಿಯ ಬದಲಾವಣೆಗೆ ಒಳಪಟ್ಟು ಅಥವಾ ಅನ್ಯಥಾ ಇದೇ ಬಗೆಯ ವಿಶ್ವವಿದ್ಯಾಲಯಗಳಿಗೆ ಅವಕಾಶವನ್ನು ಕಲ್ಪಿಸುವುದಕ್ಕೆ ಅಥವಾ ಅವುಗಳ ಪ್ರಯೋಜನಕ್ಕಾಗಿ,

–ಅನುದಾನದ ಮೂಲಕ ಅಥವಾ ಅನ್ಯಥಾ ಹಣಕಾಸು ಬೆಂಬಲವನ್ನು ಒದಗಿಸಬಹುದು:

ಮತ್ತು ಪರಂತು, ವಿಶ್ವವಿದ್ಯಾಲಯವು, ಯಾವುದೇ ಇತರ ಮೂಲದಿಂದ ಯಾವುದೇ ಆರ್ಥಿಕ ನೆರವನ್ನು ಸ್ವೀಕರಿಸಬಹುದು.

**6. ಘಟಕ ಕಾಲೇಜು, ಪ್ರಾದೇಶಿಕ ಕೇಂದ್ರಗಳು ಅಥವಾ ಅಧ್ಯಯನ ಕೇಂದ್ರಗಳನ್ನು ಸ್ಥಾಪಿಸುವುದಕ್ಕೆ ಅಧಿಕಾರ.–** ರಾಜ್ಯ ಸರ್ಕಾರದ ಪೂರ್ವಾನುಮೋದನೆಯೊಂದಿಗೆ ಮತ್ತು ವಿಶ್ವವಿದ್ಯಾಲಯ ಅನುದಾನ ಆಯೋಗದ ಮತ್ತು ಇತರ ರಾಷ್ಟ್ರೀಯ ಅಧಿಮಾನ್ಯತಾ ಸಂಸ್ಥೆಗಳ ಗುಣಮಟ್ಟಗಳಿಗೆ ಒಳಪಟ್ಟು, ವಿಶ್ವವಿದ್ಯಾಲಯವು, ರಾಜ್ಯದಲ್ಲಿ ತನಗೆ ಸೂಕ್ತವೆನಿಸುವಂಥ ಸ್ಥಳಗಳಲ್ಲಿ ಘಟಕ ಕಾಲೇಜುಗಳು, ಪ್ರಾದೇಶಿಕ ಕೇಂದ್ರಗಳು ಮತ್ತು ಅಧ್ಯಯನ ಕೇಂದ್ರಗಳನ್ನು ಹೊಂದಿರಬಹುದು.

**7. ವಿಶ್ವವಿದ್ಯಾಲಯದ ಧ್ಯೇಯೋದ್ದೇಶಗಳು.–** ವಿಶ್ವವಿದ್ಯಾಲಯವು, ತನ್ನ ಭವಿಷ್ಯದ್‌ದೃಷ್ಟಿ ಮತ್ತು ಧ್ಯೇಯೋದ್ದೇಶಗಳನ್ನು ಸಾಧಿಸಲು ಈ ಮುಂದಿನಂತೆ ವಿವಿಧ ಬಗೆಯ ಕಾರ್ಯತಂತ್ರಗಳನ್ನು ಕೈಗೊಳ್ಳಬಹುದು:–

(i) ಪ್ರಜ್ಞಾವಂತ ಸಮಾಜದ ಸೃಜನೆಗಾಗಿ ಸಾಮಾಜಿಕವಾದ ಸುಸಂಬದ್ಧ ಅವಶ್ಯಕತೆಗಳನ್ನು ಗಮನದಲ್ಲಿಟ್ಟುಕೊಂಡು ಸಂಶೋಧನೆ ಮತ್ತು ಬೋಧನೆಗಾಗಿ ಸುಭದ್ರ ನೆಲೆಗಟ್ಟನ್ನು ರೂಪಿಸುವುದು;

(ii) ರಾಜ್ಯ ಸರ್ಕಾರದ ಪೂರ್ವಾನುಮೋದನೆಯೊಂದಿಗೆ ನ್ಯಾಸಧಾರಿಗಳು ಯುಕ್ತವೆಂದು ಭಾವಿಸಬಹುದಾದಂಥ ಕಲೆ, ವಿಜ್ಞಾನ, ವಾಣಿಜ್ಯ, ಕಾನೂನು, ಇಂಜಿನಿಯರಿಂಗ್, ನಗರ ಯೋಜನೆ, ವ್ಯವಸ್ಥಾಪನೆ, ಆತಿಥ್ಯ, ಸಂಗೀತ, ಭಾಷಾ ವಿಜ್ಞಾನ ಮತ್ತು ಅಂಥ ಇತರ ವಿಷಯಗಳಲ್ಲಿ ಪದವಿ, ಸ್ನಾತಕೋತ್ತರ, ಡಾಕ್ಟೊರೇಟ್ ಪದವಿಯ (ಜಂಭಿಣಂಡಿಚಿಟ) ಮತ್ತು ಡಾಕ್ಟೊರೇಟ್ ಪದವಿ ನಂತರದ ವ್ಯಾಸಂಗ ವಿಷಯಗಳ ಕೋರ್ಸುಗಳವರೆಗೆ ಮತ್ತು ಅವುಗಳನ್ನು ಒಳಗೊಂಡಂತೆ ವಿಶ್ವವಿದ್ಯಾಲಯದ ಶಿಕ್ಷಣದ ಸುಧಾರಣೆಯನ್ನು ಬೆಂಬಲಿಸುವುದು, ಉತ್ತೇಜಿಸುವುದು ಮತ್ತು ಕೈಗೆತ್ತಿಕೊಳ್ಳುವುದು;

(iii) ರಾಜ್ಯ ಸರ್ಕಾರದ ಪೂರ್ವಾನುಮೋದನೆಯೊಂದಿಗೆ ವಿಶ್ವವಿದ್ಯಾಲಯದ ಗುಣಮಟ್ಟಗಳಿಗನುಸಾರವಾಗಿ ಶೈಕ್ಷಣಿಕ ಬದಲಾವಣೆ ಮತ್ತು ಸಾಮಾಜಿಕ ಹಾಗೂ ಮಾನವಾಭಿವೃದ್ಧಿ ಬಗ್ಗೆ ಅರಿವನ್ನುಂಟು ಮಾಡಲು ಮತ್ತು ಆ ಬಗ್ಗೆ ಕೊಡುಗೆ ನೀಡಲು

ಕರ್ನಾಟಕದಲ್ಲಿನ ವಿವಿಧ ಸ್ಥಳಗಳಲ್ಲಿ ಕ್ಯಾಂಪಸ್ಸುಗಳನ್ನು ಸ್ಥಾಪಿಸುವುದು ಮತ್ತು ಅಧ್ಯಯನ ಕೇಂದ್ರಗಳು, ಸಂಯೋಜಿತ ಕಾಲೇಜುಗಳು ಮತ್ತು ಪ್ರಾದೇಶಿಕ ಕೇಂದ್ರಗಳನ್ನು ಹೊಂದುವುದು;

(iv) ಪರಿಸರ ಸ್ನೇಹಿ ನಿರ್ಮಾಣ, ಇಂಧನ ಸಂರಕ್ಷಣೆ, ಪರಂಪರಾ ಸಂರಕ್ಷಣೆ, ದೇಶೀಯ ಉತ್ಪಾದನಾ ಸಂಪ್ರದಾಯಗಳ ಕಡೆಗೆ ಒಯ್ಯುವಂತೆ ಸಂಶೋಧನೆ ಮತ್ತು ಬೋಧನೆ, ವಾಸ್ತು ಶಿಲ್ಪ ಮತ್ತು ನಗರ ಯೋಜನೆ, ಪರಂಪರೆಯ ಸಂರಕ್ಷಣೆ, ಭೂದೃಶ್ಯ ವಿನ್ಯಾಸ, ಕರಕುಶಲಕಲೆಗಳು ಮತ್ತು ಗ್ರಾಫೀಕ್ ವಿನ್ಯಾಸಗಳಿಗೆ ಸಮಗ್ರ ಚೌಕಟ್ಟನ್ನು ಹೊಂದಿರುವುದು;

(v) ಏರೋಸ್ಪೇಸ್ ಇಂಜಿನಿಯರಿಂಗ್ ಮತ್ತು ನಿರ್ವಹಣೆಯ ವಿಶೇಷ ಕ್ಷೇತ್ರಗಳಲ್ಲಿ ಶಿಕ್ಷಣ ಮತ್ತು ತರಬೇತಿ ನೀಡುವುದು, ಜ್ಞಾನದಲ್ಲಿ ಅಭಿವೃದ್ಧಿ ಮತ್ತು ಪ್ರಸಾರಕ್ಕೆ ಸಂಬಂಧಿಸಿದಂತೆ ಸಂಶೋಧನೆಯ ಅವಕಾಶವನ್ನು ಕಲ್ಪಿಸುವುದು, ಅಂತರಾಷ್ಟ್ರೀಯ ವ್ಯವಹಾರಗಳೊಂದಿಗೆ, ನಿರ್ದಿಷ್ಟವಾಗಿ ಗ್ರಾಮೀಣಾಭಿವೃದ್ಧಿಯನ್ನು ಗಮನದಲ್ಲಿಟ್ಟುಕೊಂಡು ರಾಷ್ಟ್ರೀಯ ಅಭಿವೃದ್ಧಿಯ ಮೇಲೆ ಏರೋಸ್ಪೇಸ್ ತಾಂತ್ರಿಕತೆಗಳ ಪ್ರಭಾವದ ಮೇಲೆ ಅಧ್ಯಯನವನ್ನು ಕೈಗೊಳ್ಳುವುದು, ಏರೋಸ್ಪೇಸ್ ಇಂಜಿನಿಯರಿಂಗ್ ಮತ್ತು ನಿರ್ವಹಣೆಯಲ್ಲಿ ಅದ್ವಿತೀಯ ಕೇಂದ್ರವನ್ನು ಸೃಜಿಸುವ ಉದ್ದೇಶಗಳನ್ನು ಸಾಧಿಸಲು ಅವಶ್ಯಕವಾಗಬಹುದಾದಂಥ ಅಥವಾ ಅಪೇಕ್ಷಣೀಯವಾಗಬಹುದಾದಂಥ ಇತರೆ ಕಾರ್ಯಗಳು ಮತ್ತು ಕೆಲಸಗಳನ್ನು ಮಾಡುವುದು;

(vi) ಸಾರ್ವಜನಿಕ ಆಡಳಿತಗಳ ವಿವಿಧ ಆಯಾಮಗಳನ್ನು ವಿಶ್ಲೇಷಿಸಲು ಮತ್ತು ನಿರ್ಧರಿಸಲು ಸಂಪನ್ಮೂಲ ಕೇಂದ್ರ ಮತ್ತು ಸಂಶೋಧನಾ ತಂಡದ ಅಭಿವೃದ್ಧಿಗೆ ಮಾನವಿಕಗಳು, ಸಮಾಜ ವಿಜ್ಞಾನ ಮತ್ತು ಕಲೆಗಳ ಮೇಲೆ ಹೆಚ್ಚಿನ ಗಮನ ನೀಡುವುದು;

(vii) ವಾಣಿಜ್ಯೋದ್ಯಮ ಮತ್ತು ವಾಣಿಜ್ಯೋದ್ಯಮಿಗೆ ಸಂಬಂಧಿಸಿದ ಕ್ಷೇತ್ರಗಳಲ್ಲಿ ಸಂಶೋಧನೆ ನಡೆಸಲು ಸುಭದ್ರ ನೆಲೆಗಟ್ಟನ್ನು ರೂಪಿಸುವುದು ಮತ್ತು ಈಗಷ್ಟೆ ರೂಪುತಳೆಯುತ್ತಿರುವ ಕಂಪನಿಗಳಿಗೆ ಕಾರ್ಯತಂತ್ರದ ಸಲಹೆಗಳನ್ನು ಒದಗಿಸುವುದೂ ಒಳಗೊಂಡಂತೆ ಪ್ರಕರಣದ ಅಧ್ಯಯನಗಳನ್ನು ಅಭಿವೃದ್ಧಿಪಡಿಸುವುದು.

(viii) ಕರ್ನಾಟಕದ ಪ್ರಾಚೀನ ಇತಿಹಾಸ ಮತ್ತು ಶ್ರೀಮಂತ ಸಂಸ್ಕೃತಿಯ ಅಧ್ಯಯನಕ್ಕೆ ವಿಶೇಷ ಪ್ರಾಶಸ್ತ್ಯ ನೀಡಿ, ಪ್ರಾಚೀನ ಭಾರತದ ಸಾಹಿತ್ಯ, ಸಂಕಲನ ಮತ್ತು ಪ್ರಕಟಗೊಳ್ಳದ ಹಸ್ತ ಪ್ರತಿಗಳನ್ನು ಭಾಷಾಂತರಿಸುವುದು, ಮನಃಶಾಸ್ತ್ರ ಕ್ಷೇತ್ರದಲ್ಲಿ ಪ್ರಾಚೀನ ಭಾರತೀಯರ ಕೊಡುಗೆಗಳ ವಿಶಿಷ್ಟವಾದ ಲಕ್ಷಣಗಳನ್ನು ಗುರುತಿಸುವುದು ಇವುಗಳಲ್ಲಿ ಬಳಸಿಕೊಂಡ ತಾಂತ್ರಿಕ ವೈಜ್ಞಾನಿಕ ಪರಿಭಾಷೆಗಳಾಗಿರುವಂಥ ಭಾರತೀಯ ಸ್ಥಾವರಗಳ ಆಧಾರದ ಮೇಲೆ ಪ್ರಾಚೀನ ಹಸ್ತಪ್ರತಿಗಳ ಅಧ್ಯಯನ, ಸಂಗ್ರಹಣೆ ಮತ್ತು ಮಾಹಿತಿಯನ್ನು ಸಿದ್ಧಪಡಿಸುವುದರ ಮೇಲೆ ಗಮನ ನೀಡಿ ಪ್ರಾಚೀನ ಇತಿಹಾಸ ಮತ್ತು ಸಂಸ್ಕೃತಿಯ ಅಧ್ಯಯನಕ್ಕೆ ಸಮರ್ಪಿತವಾದಂಥ ಸಂಶೋಧನಾ ಕೇಂದ್ರವನ್ನು ಸೃಜಿಸುವುದು.

(ix) ದೂರ ಶಿಕ್ಷಣ ಪರಿಷತ್ತು ಮತ್ತು ಸಂಬಂಧಪಟ್ಟ ರಾಜ್ಯ ಸರ್ಕಾರವು ಕಾಲಕಾಲಕ್ಕೆ ವಿಧಿಸಿದ ಗುಣಮಟ್ಟಗಳ ಪ್ರಕಾರ ಲಕ್ಷಾಂತರ ವಿದ್ಯಾರ್ಥಿಗಳು, ಶಿಕ್ಷಕರು, ಶಿಕ್ಷಣ ಆಡಳಿತಗಾರರು ಮತ್ತು ಅಭಿವೃದ್ಧಿ ವೃತ್ತಿಗರಿಗೆ ನಿಲುಕುವಂತೆ ಮುಂದುವರೆದ ಹಾಗೂ ದೂರ ಶಿಕ್ಷಣ ಕಾರ್ಯಕ್ರಮಗಳನ್ನು ಪ್ರಾರಂಭಿಸುವುದು;

(x) ಮೌಲ್ಯಮಾಪನದ ವಿವಿಧ ಆಧುನಿಕ ವಿಧಾನಗಳ ಮೂಲಕ ಮಾಡಿದ ಮೌಲ್ಯಮಾಪನಕ್ಕೆ ಅನುಸಾರವಾಗಿ ಶಿಕ್ಷಣವನ್ನು ಯಶಸ್ವಿಯಾಗಿ ಪೂರ್ಣಗೊಳಿಸಿದುದರ ಆಧಾರದ ಮೇಲೆ ನೀಡಲು ಪದವಿಗಳನ್ನು, ಡಿಪ್ಲೋಮೋಗಳನ್ನು, ಪ್ರಮಾಣಪತ್ರಗಳನ್ನು ಮತ್ತು ಯಶೋಪತ್ರ ಪ್ರದಾನದಂಥ ಇತರ ಶೈಕ್ಷಣಿಕ ಪ್ರಶಸ್ತಿಗಳನ್ನು ಪ್ರಾರಂಭಿಸುವುದು;

(xi) ನಗರ ವಿನ್ಯಾಸ ಯೋಜನೆಯನ್ನು ರೂಪಿಸುವುದಕ್ಕಾಗಿ, ಅಭಿವೃದ್ಧಿಪಡಿಸುವುದಕ್ಕಾಗಿ ವಿದ್ಯಾರ್ಥಿಗಳಿಗೆ, ಬೋಧಕ ವೃಂದದ (ಫ್ಯಾಕಲ್ಟಿ) ಸದಸ್ಯರಿಗೆ ಮತ್ತು ಇತರರಿಗೆ ನಿರ್ದಿಷ್ಟ ಶೈಕ್ಷಣಿಕ ಮತ್ತು ಸಂಶೋಧನಾ ಕಾರ್ಯಕ್ರಮಗಳನ್ನು, ತರಬೇತಿ ಕಾರ್ಯಕ್ರಮಗಳನ್ನು ಮತ್ತು ವಿನಿಮಯ ಕಾರ್ಯಕ್ರಮಗಳನ್ನು ಏರ್ಪಡಿಸುವುದಕ್ಕಾಗಿ ಭಾರತದಲ್ಲಿಯ ಅಥವಾ ವಿದೇಶದಲ್ಲಿಯ ಇತರ ಯಾವುದೇ ವಿಶ್ವವಿದ್ಯಾಲಯಗಳು, ಸಂಶೋಧನಾ ಸಂಸ್ಥೆಗಳು, ಲಾಭರಹಿತ ಸಂಸ್ಥೆಗಳು, ಕೈಗಾರಿಕಾ ಸಂಸ್ಥೆಗಳು, ವೃತ್ತಿಪರ ಸಂಸ್ಥೆಗಳು ಅಥವಾ ಇತರ ಸಂಸ್ಥೆಗಳೊಂದಿಗೆ ಸಹಯೋಗವನ್ನು ಹೊಂದುವುದು;

(xii) ರಾಜ್ಯ ಸರ್ಕಾರದ ಪೂರ್ವಾನುಮತಿಯೊಡನೆ, ವಿಶ್ವಾದ್ಯಂತ ಇರುವ ಉತ್ತಮ ಗುಣಮಟ್ಟದ ಇತರ ಯಾವುವೇ ವಿಶ್ವವಿದ್ಯಾಲಯಗಳೊಂದಿಗೆ ಸಹಭಾಗಿಗಳಾಗಿ ವಿಶ್ವವಿದ್ಯಾಲಯದ ಬೋಧಕ ವೃಂದ (ಫ್ಯಾಕಲ್ಟಿ) ಮತ್ತು ಸಂಶೋಧಕರ ಅಭಿವೃದ್ಧಿ ಮತ್ತು ತರಬೇತಿಗಾಗಿ ಕಾರ್ಯಕ್ರಮಗಳನ್ನು ಕೈಗೊಳ್ಳುವುದು;

(xiii) ರಾಜ್ಯ ಸರ್ಕಾರದ ಪೂರ್ವ ಅನುಮೋದನೆಯೊಡನೆ, ಭಾರತದಲ್ಲಿನ ಅಥವಾ ವಿದೇಶದಲ್ಲಿನ ಯಾವುದೇ ಸಂಸ್ಥೆಯೊಂದಿಗೆ ಸಹಯೋಗ ಹೊಂದಿ ಸಂಶೋಧನೆಯನ್ನು ಮತ್ತು ಹೊಸತನವನ್ನು ಬೆಳಕಿಗೆ ತರುವುದು;

(xiv) ತಾನು ಸೂಕ್ತವೆಂದು ಭಾವಿಸಬಹುದಾದಂತೆ, ಕಲಿಕೆಯ ಅಂಥ ಶಾಖೆಗಳಲ್ಲಿ ಬೋಧನಾ ಮತ್ತು ಸಂಶೋಧನಾ ಸೌಲಭ್ಯಗಳನ್ನು ಒದಗಿಸಿ ಜ್ಞಾನ ಪ್ರಸಾರ ಮಾಡುವುದು ಮತ್ತು ಅದನ್ನು ಮುಂದುವರೆಸುವುದು ಹಾಗೂ ವಿಶೇಷವಾಗಿ ವಿಶ್ವವಿದ್ಯಾಲಯದ ಶೈಕ್ಷಣಿಕ ಕಾರ್ಯಕ್ರಮದಲ್ಲಿ ಮಾನವಿಕ ಮತ್ತು ವಿಜ್ಞಾನ ವಿಷಯಗಳಲ್ಲಿ ಸಮಗ್ರ ವ್ಯಾಸಂಗ ವಿಷಯಗಳಿಗಾಗಿ ವಿಶೇಷ ಉಪಬಂಧ ಕಲ್ಪಿಸುವುದು ಮತ್ತು ವಿಶ್ವವಿದ್ಯಾಲಯದಲ್ಲಿ ಅಂತರವಿದ್ಯಾವಿಷಯಗಳ ಅಧ್ಯಯನ ಮತ್ತು ಸಂಶೋಧನೆಗೆ ಉತ್ತೇಜನ ನೀಡುವುದಕ್ಕಾಗಿ ಸೂಕ್ತ ಕ್ರಮ ಕೈಗೊಳ್ಳುವುದು;

(xv) ಉನ್ನತ ಕಲಿಕೆಗೆ ಪ್ರವೇಶಾವಕಾಶಗಳನ್ನು ಮತ್ತು ನ್ಯಾಯ ನೀತಿಗೆ ಉತ್ತೇಜನ ನೀಡುವ ದೃಷ್ಟಿಯಿಂದ, ಕಲಿಕೆಯ ವಿಧಾನಗಳು ಮತ್ತು ಸ್ಥಳಗಳು, ವ್ಯಾಸಂಗ ಕ್ರಮಗಳ ಸಂಯೋಜನೆ, ದಾಖಲಾತಿಗಾಗಿ ಅರ್ಹತೆ, ಪ್ರವೇಶದ ವಯಸ್ಸು, ಪರೀಕ್ಷೆಯನ್ನು ನಡೆಸುವುದು ಮತ್ತು ಕಾರ್ಯಕ್ರಮಗಳ ನಿರ್ವಹಣೆಗೆ ಸಂಬಂಧಿಸಿದಂತೆ ನಮ್ಯವಾದ (ಫ್ಲೆಕ್ಸಿಬಲ್) ಮತ್ತು ಮುಕ್ತವಾದ, ವಿಶ್ವವಿದ್ಯಾಲಯ ಮಟ್ಟದ ಶಿಕ್ಷಣದ ಅನ್ವೇಷಣಾ ಪದ್ಧತಿಯನ್ನು ಅಳವಡಿಸುವುದು ಹಾಗೂ ಜ್ಞಾನದ ಹೊಸ ಕ್ಷೇತ್ರಗಳಲ್ಲಿ ಉತ್ಕೃಷ್ಟತೆಗೆ ಪ್ರೋತ್ಸಾಹಿಸುವುದು, ಶೈಕ್ಷಣಿಕ ಮತ್ತು ಸಮನ್ವಯ ಕಲಿಕೆ, ಇವೆರೆಡಕ್ಕೂ ಸಮನಾದ ಪ್ರಾಮುಖ್ಯತೆಯನ್ನು ನೀಡುವುದು;

(xvi) ತನ್ನ ಕಾರ್ಯನೀತಿಗಳು ಮತ್ತು ಕಾರ್ಯಕ್ರಮಗಳ ಮೂಲಕ ರಾಷ್ಟ್ರೀಯ ಸಮಗ್ರತೆ ಮತ್ತು ಮಾನವ ವ್ಯಕ್ತಿತ್ವದ ಸಮಗ್ರ ವಿಕಾಸಕ್ಕೆ ಪ್ರೋತ್ಸಾಹಿಸುವುದು.

**8. ವಿಶ್ವವಿದ್ಯಾಲಯದ ಅಧಿಕಾರಗಳು.–** ವಿಶ್ವವಿದ್ಯಾಲಯವು ಈ ಮುಂದಿನ ಅಧಿಕಾರಗಳನ್ನು ಹೊಂದಿರತಕ್ಕದ್ದು, ಎಂದರೆ:–

(i) ಸರ್ಕಾರದ ಪೂರ್ವಾನುಮೋದನೆಯೊಂದಿಗೆ ಮತ್ತು ವಿಶ್ವವಿದ್ಯಾಲಯದ ಅನುದಾನ ಆಯೋಗದ ಗುಣಮಟ್ಟಗಳಿಗೆ ಅನುಸಾರವಾಗಿ ಪರಿನಿಯಮಗಳಲ್ಲಿ ಹೇಳಲಾದ ರೀತಿಯಲ್ಲಿ ಕಾಲಕಾಲಕ್ಕೆ ವಿಶ್ವವಿದ್ಯಾಲಯವು ನಿರ್ಧರಿಸಬಹುದಾದಂತೆ ಕ್ಯಾಂಪಸ್ಸುಗಳು, ಪ್ರಾದೇಶಿಕ ಕೇಂದ್ರಗಳು ಮತ್ತು ಅಧ್ಯಯನ ಕೇಂದ್ರಗಳನ್ನು ಸ್ಥಾಪಿಸುವುದು ಮತ್ತು ನಿರ್ವಹಿಸುವುದು;

(ii) ವಿಶ್ವವಿದ್ಯಾಲಯದ ಉದ್ದೇಶವನ್ನು ಕಾರ್ಯರೂಪಕ್ಕೆ ತರುವಲ್ಲಿ ಅಗತ್ಯವಾಗಬಹುದಾದ ಅಥವಾ ಕಾರ್ಯಸಾಧ್ಯವಾಗಬಹುದಾದ ಎಲ್ಲಾ ಅಂಥ ಇತರ ಚಟುವಟಿಕೆಗಳನ್ನು ಕೈಗೊಳ್ಳುವುದು;

(iii) ಪರಿನಿಯಮಗಳಲ್ಲಿ ಹೇಳಲಾದ ರೀತಿಯಲ್ಲಿ ಮತ್ತು ಷರತ್ತುಗಳಿಗೊಳಪಟ್ಟು ಪದವಿಗಳು ಅಥವಾ ಇತರ ಶೈಕ್ಷಣಿಕ ಪ್ರಶಸ್ತಿಗಳನ್ನು ಪ್ರದಾನಮಾಡುವುದು;

(iv) ಪರಿನಿಯಮಗಳನ್ವಯ ಸಂಶೋಧನಾ ವೇತನಗಳು (ಫೆಲೋಶಿಪ್‌ಗಳು), ವಿದ್ಯಾರ್ಥಿ ವೇತನಗಳು ಮತ್ತು ಬಹುಮಾನಗಳು, ಅವಾರ್ಡುಗಳು, ಪಾರಿತೋಷಕಗಳು ಇತ್ಯಾದಿಗಳನ್ನು ಸ್ಥಾಪಿಸುವುದು ಮತ್ತು ನೀಡುವುದು;

(v) ಪರಿನಿಯಮಗಳಲ್ಲಿ ಅಥವಾ ಸಂದರ್ಭಾನುಸಾರವಾಗಿ ನಿಯಮಗಳಲ್ಲಿ ನಿಗದಿಪಡಿಸಬಹುದಾದ ಅಂಥ ಶುಲ್ಕಗಳು, ಬಿಲ್ಲುಗಳು, ಖರೀದಿ ಪಟ್ಟಿಗಳನ್ನು ಕೇಳಿಪಡೆದುಕೊಳ್ಳುವುದು ಮತ್ತು ಸ್ವೀಕರಿಸುವುದು ಹಾಗೂ ಚಾರ್ಜುಗಳನ್ನು ವಸೂಲು ಮಾಡುವುದು;

(vi) ವಿದ್ಯಾರ್ಥಿಗಳಿಗೆ ಮತ್ತು ಸಿಬ್ಬಂದಿಗಳಿಗೆ ಪಠ್ಯೇತರ ಚಟುವಟಿಕೆಗಳಿಗೆ ಅವಕಾಶಗಳನ್ನು ಕಲ್ಪಿಸುವುದು;

(vii) ವಿಶ್ವವಿದ್ಯಾಲಯದ ಅಥವಾ ಘಟಕ ಕಾಲೇಜಿನ, ಕ್ಯಾಂಪಸುಗಳ, ಪ್ರಾದೇಶಿಕ ಕೇಂದ್ರಗಳ, ಅಧ್ಯಯನ ಕೇಂದ್ರಗಳ ಫ್ಯಾಕಲ್ಟಿ, ಅಧಿಕಾರಿಗಳು ಮತ್ತು ಸಿಬ್ಬಂದಿಗಳನ್ನು ನೇಮಕ ಮಾಡಿಕೊಳ್ಳುವುದು;

(viii) ವಿಶ್ವವಿದ್ಯಾಲಯದ ಅಥವಾ ಒಂದು ಘಟಕ ಕಾಲೇಜಿನ ಅಥವಾ ಕ್ಯಾಂಪಸ್ಸಿನ, ಪ್ರಾದೇಶಿಕ ಕೇಂದ್ರದ, ಅಧ್ಯಯನ ಕೇಂದ್ರದ ಉದ್ದೇಶಕ್ಕಾಗಿ, ತತ್ಕಾಲದಲ್ಲಿ ಜಾರಿಯಲ್ಲಿರುವ ಯಾವುದೇ ಕಾನೂನಿನ ಮೂಲಕ ನಿಷೇಧಿಸದಿರುವ, ಯಾವುದೇ ರೀತಿಯ ಸ್ವಯಂ ದೇಣಿಗೆಗಳು ಮತ್ತು ಕೊಡುಗೆಗಳನ್ನು ಸ್ವೀಕರಿಸುವುದು ಮತ್ತು ನ್ಯಾಸ ಮತ್ತು ದತ್ತಿ ಸ್ವತ್ತುಗಳೂ ಸೇರಿದಂತೆ, ಯಾವುದೇ ಚರ ಅಥವಾ ಸ್ಥಿರ ಸ್ವತ್ತನ್ನು ಅರ್ಜಿಸುವುದು, ಹೊಂದಿರುವುದು, ನಿರ್ವಹಿಸುವುದು, ನಡೆಸುವುದು ಮತ್ತು ಹಸ್ತಾಂತರ ಮಾಡುವುದು;

(ix) ವಿದ್ಯಾರ್ಥಿನಿಲಯಗಳನ್ನು ಸ್ಥಾಪಿಸುವುದು ಮತ್ತು ನಿರ್ವಹಿಸಿಕೊಂಡು ಬರುವುದು ಹಾಗೂ ವಿಶ್ವವಿದ್ಯಾಲಯದ ಅಥವಾ ಘಟಕ ಕಾಲೇಜಿನ ವಿದ್ಯಾರ್ಥಿಗಳಿಗೆ ವಸತಿ ಸ್ಥಳಗಳಾಗಿ ಮಾನ್ಯತೆ ನೀಡುವುದು;

(x) ವಸತಿಯ ಮೇಲ್ವಿಚಾರಣೆ ಮಾಡುವುದು ಮತ್ತು ನಿಯಂತ್ರಣ ಮಾಡುವುದು ಹಾಗೂ ವಿದ್ಯಾರ್ಥಿಗಳು ಮತ್ತು ಎಲ್ಲಾ ಪ್ರವರ್ಗಗಳ ಸಿಬ್ಬಂದಿಗಳಲ್ಲಿ ಶಿಸ್ತು ನಿಯಂತ್ರಣ ಮಾಡುವುದು ಮತ್ತು ವಿದ್ಯಾರ್ಥಿಗಳು ಮತ್ತು ಸಿಬ್ಬಂದಿಗಳಿಗೆ ನಡತೆ ಸಂಹಿತೆಯನ್ನು ರೂಪಿಸುವುದೂ ಒಳಗೊಂಡಂತೆ, ಅಂಥ ಸಿಬ್ಬಂದಿಗಳ ಸೇವಾಷರತ್ತುಗಳನ್ನು ನಿರೂಪಿಸುವುದು;

(xi) ಶೈಕ್ಷಣಿಕ, ಆಡಳಿತಾತ್ಮಕ ಮತ್ತು ಬೆಂಬಲ ಸಿಬ್ಬಂದಿಯ ಹುದ್ದೆಗಳನ್ನು ಮತ್ತು ಇತರ ಅವಶ್ಯ ಹುದ್ದೆಗಳನ್ನು ಸೃಜಿಸುವುದು;

(xii) ವಿಶ್ವವಿದ್ಯಾಲಯವು ಕಾಲಕಾಲಕ್ಕೆ ನಿರ್ಧರಿಸಬಹುದಾದಂಥ ರೀತಿಯಲ್ಲಿ ಮತ್ತು ಅಂಥ ಉದ್ದೇಶಗಳಿಗಾಗಿ ಇತರ ವಿಶ್ವವಿದ್ಯಾಲಯಗಳೊಡನೆ ಸಹಕರಿಸುವುದು ಮತ್ತು ಸಹಯೋಗ ಹೊಂದುವುದು;

(xiii) ದೂರ ಶಿಕ್ಷಣಕ್ಕೆ ಮತ್ತು ವಿಶ್ವವಿದ್ಯಾಲಯದ ಶೈಕ್ಷಣಿಕ ಕಾರ್ಯಕ್ರಮಗಳಿಗೆ ಸಂಬಂಧಪಟ್ಟಂತೆ ದೂರ ಶಿಕ್ಷಣವನ್ನು ಯಾವ ರೀತಿಯಲ್ಲಿ ಸಂಘಟಿಸಬಹುದು ಎಂಬುದಕ್ಕೆ ಉಪಬಂಧ ಕಲ್ಪಿಸುವುದು;

(xiv) ಶಿಕ್ಷಕರಿಗೆ, ಪಾಠಗಳನ್ನು ರಚಿಸುವವರಿಗೆ, ಮೌಲ್ಯಮಾಪಕರಿಗೆ ಮತ್ತಿತರ ಶೈಕ್ಷಣಿಕ ಸಿಬ್ಬಂದಿಗೆ ಪುನರ್ಮನನ ವ್ಯಾಸಂಗಕ್ರಮಗಳು, ಅಭಿಮುಖ ವ್ಯಾಸಂಗ ಕ್ರಮಗಳು, ಕಾರ್ಯಾಗಾರಗಳು, ವಿಚಾರಗೋಷ್ಠಿಗಳು ಮತ್ತಿತರ ಕಾರ್ಯಕ್ರಮಗಳನ್ನು ಏರ್ಪಡಿಸುವುದು ಮತ್ತು ನಡೆಸುವುದು.

(xv) ಶೈಕ್ಷಣಿಕ ಪರಿಷತ್ತಿನ ಅನುಮೋದನೆಯೊಂದಿಗೆ ವಿಶ್ವವಿದ್ಯಾಲಯದ ಅಥವಾ ಘಟಕ ಕಾಲೇಜಿನ, ಪ್ರಾದೇಶಿಕ ಕೇಂದ್ರಗಳಿಗೆ, ಅಧ್ಯಯನ ಕೇಂದ್ರಗಳಿಗೆ ಪ್ರವೇಶಕ್ಕೆ ಮಾನಕ ಗುಣಮಟ್ಟಗಳನ್ನು ನಿರ್ಧರಿಸುವುದು;

(xvi) ವಿಶ್ವವಿದ್ಯಾಲಯದ ಧ್ಯೇಯೋದ್ದೇಶಗಳನ್ನು ಕಾರ್ಯರೂಪಕ್ಕೆ ತರಲು ಅವಶ್ಯವಾಗಬಹುದಾದಂಥ ಇತರ ಎಲ್ಲಾ ಕ್ರಮಗಳನ್ನು ಅಥವಾ ಕಾರ್ಯಗಳನ್ನು, ಅವು ಮೇಲೆ ಹೇಳಿದ ಅಧಿಕಾರಗಳಿಗೆ ಪ್ರಾಸಂಗಿಕವಾಗಿರಲಿ ಅಥವಾ ಇಲ್ಲದಿರಲಿ, ಕೈಗೊಳ್ಳುವುದು;

(xvii) ಪರೀಕ್ಷೆಗಳ ಆಧಾರದ ಮೇಲೆ ಅಥವಾ ಸರ್ಕಾರದಿಂದ ಅನುಮೋದಿತವಾದ ಇತರ ಯಾವುದೇ ಮೌಲ್ಯಮಾಪನ ವಿಧಾನದ ಆಧಾರದ ಮೇಲೆ ನೀಡಲು ಪದವಿಗಳು, ಡಿಪ್ಲೋಮಾಗಳು, ಪ್ರಮಾಣಪತ್ರಗಳು ಮತ್ತು ಇತರ ಶೈಕ್ಷಣಿಕ ಪ್ರಶಸ್ತಿಗಳನ್ನು ಸ್ಥಾಪಿಸುವುದು;

(xviii) ಫಿಲಂಗಳು, ಕ್ಯಾಸೆಟ್‌ಗಳು, ಧ್ವನಿಸುರುಳಿಗಳು, ದೃಶ್ಯಸುರುಳಿಗಳು, ಸಿ.ಡಿ., ವಿ.ಸಿ.ಡಿ. ಮತ್ತು ಇತರ ತಂತ್ರಾಂಶಗಳೂ ಹಾಗೂ ಇತರ ಸಂಬಂಧಿತ ವಿದ್ಯುನ್ಮಾನ ಮತ್ತು ಮುದ್ರಣ ಮಾಧ್ಯಮ ಸೇರಿದಂತೆ ಬೋಧಕ ಸಾಮಗ್ರಿಗಳನ್ನು ತಯಾರಿಸುವುದಕ್ಕಾಗಿ ಅವಕಾಶ ಕಲ್ಪಿಸುವುದು;

(xix) ಪ್ರಬಂಧಕ ಮಂಡಳಿಯ ಅನುಮೋದನೆಯೊಡನೆ ವಿಶ್ವವಿದ್ಯಾಲಯದ ಉದ್ದೇಶಗಳಿಗಾಗಿ ವಿಶ್ವವಿದ್ಯಾಲಯದ ಸ್ವತ್ತುಗಳನ್ನು ಭದ್ರತೆಯಾಗಿ ನೀಡಿ ಅಥವಾ ನೀಡದೆ ಹಣವನ್ನು ಪಡೆಯುವುದು, ಸಂಗ್ರಹಿಸುವುದು, ಚಂದಾದಾರರಾಗುವುದು ಮತ್ತು ಸಾಲ ಪಡೆಯುವುದು;

(xx) ಸರ್ಕಾರದ ಪೂರ್ವಾನುಮೋದನೆಯೊಂದಿಗೆ ಯಾವುದೇ ಇತರ ಶೈಕ್ಷಣಿಕ ಸಂಸ್ಥೆಗಳ ಆಡಳಿತವನ್ನು ವಶಪಡಿಸಿಕೊಳ್ಳುವುದು, ವಹಿಸಿಕೊಳ್ಳುವುದು ಮತ್ತು ನಡೆಸುವುದು;

(xxi) ವ್ಯವಸ್ಥಾಪನಾ ಮಂಡಳಿಯ ಪೂರ್ವಾನುಮೋದನೆಯೊಂದಿಗೆ ಸ್ವತ್ತುಗಳನ್ನು ಆರ್ಜಿಸುವುದು;

(xxii) ವಿಶ್ವವಿದ್ಯಾಲಯದ ಮೇಲಿನ ಉದ್ದೇಶಗಳಿಗೆ ಸಂಬಂಧಿಸಿದ ಅಥವಾ ಪ್ರಾಸಂಗಿಕವಾದ ಯಾವುದೇ ಇತರ ಚಟುವಟಿಕೆಗಳನ್ನು ಕೈಗೊಳ್ಳುವುದು.

**9. ವಿಶ್ವವಿದ್ಯಾಲಯವು ಎಲ್ಲಾ ವರ್ಗ, ಜಾತಿ, ಮತ ಮತ್ತು ಲಿಂಗಭೇದವಿಲ್ಲದೆ ಎಲ್ಲರಿಗೂ ಮುಕ್ತವಾಗಿರತಕ್ಕದ್ದು.–** ವಿಶ್ವವಿದ್ಯಾಲಯದ ಪ್ರವೇಶಗಳು ವರ್ಗ, ಜಾತಿ, ಮತ, ಲಿಂಗ ಅಥವಾ ರಾಷ್ಟ್ರ ಭೇದವಿಲ್ಲದೆ ಎಲ್ಲಾ ವ್ಯಕ್ತಿಗಳಿಗೂ ಮುಕ್ತವಾಗಿರತಕ್ಕದ್ದು. ಎಲ್ಲಾ ಪ್ರವೇಶಗಳನ್ನು ಅರ್ಹತಾ ಪರೀಕ್ಷೆಗಳಲ್ಲಿನ ಅರ್ಹತೆಯ ಆಧಾರದ ಮೇಲೆ ಮಾಡತಕ್ಕದ್ದು:

ಪರಂತು, ವೃತ್ತಿಪರ ಮತ್ತು ತಾಂತ್ರಿಕ ಕೋರ್ಸು (ವಿಷಯ)ಗಳಲ್ಲಿನ ಪ್ರವೇಶವನ್ನು, ವಿಶ್ವವಿದ್ಯಾಲಯದಿಂದ ಅಥವಾ ಅದೇ ಕೋರ್ಸು (ವಿಷಯ)ಗಳನ್ನು ನಡೆಸುವ ವಿಶ್ವವಿದ್ಯಾಲಯದ ಸಂಘಗಳಿಂದ ನಡೆಸುವ ಮುಕ್ತ ಸ್ಪರ್ಧಾತ್ಮಕ ಪರೀಕ್ಷೆಗಳ ಮೂಲಕ ಅಥವಾ ಯಾವುದೇ ರಾಜ್ಯ ಅಥವಾ ಕೇಂದ್ರ ಏಜೆನ್ಸಿಗಳು ಅಥವಾ ಯಾವುದೇ ಇತರ ನಿಕಾಯಗಳು ನಡೆಸುವ ಪ್ರವೇಶ ಪರೀಕ್ಷೆಯಲ್ಲಿ ಗಳಿಸಿದ ಅಂಕಗಳ ಆಧಾರದ ಮೇಲೆ ಮಾಡಿಕೊಳ್ಳತಕ್ಕದ್ದು.

ಮತ್ತು ಪರಂತು, ವಿಶ್ವವಿದ್ಯಾಲಯದ ಶೈಕ್ಷಣಿಕ ಕಾರ್ಯಕ್ರಮಗಳಲ್ಲಿನ ಒಟ್ಟು ಸೀಟುಗಳ ಶೇಕಡ ಐವತ್ತಕ್ಕಿಂತ ಕಡಿಮೆಯಿಲ್ಲದ ಸೀಟುಗಳಿಗೆ ಪ್ರವೇಶವನ್ನು ಕರ್ನಾಟಕ ರಾಜ್ಯದಲ್ಲಿ ನಿವಾಸಿಗಳಾಗಿರುವ ವಿದ್ಯಾರ್ಥಿಗಳಿಗೆ, ಅವರು ಪ್ರವೇಶಕ್ಕೆ ಇರುವ ಮಾನದಂಡಗಳನ್ನು ಪೂರೈಸುವುದಕ್ಕೆ ಒಳಪಟ್ಟು, ಕಾಯ್ದಿರಿಸತಕ್ಕದ್ದು. ಈ ಪ್ರವರ್ಗದಲ್ಲಿ, ಅಂಥ ವಿದ್ಯಾರ್ಥಿಗಳು ಸಾಕಷ್ಟು ಸಂಖ್ಯೆಯಲ್ಲಿ ಲಭ್ಯವಿಲ್ಲದಿದ್ದಾಗ ಹಾಗೆ ಕಾಯ್ದಿರಿಸಿದ ಸೀಟುಗಳನ್ನು ಸಾಮಾನ್ಯ ವರ್ಗದ ಅಭ್ಯರ್ಥಿಗಳಿಂದ ಭರ್ತಿಮಾಡತಕ್ಕದ್ದು:

ಅಲ್ಲದೆ ಪರಂತು ವಿಶ್ವವಿದ್ಯಾಲಯವು ಒಪ್ಪಿಗೆಯ ಕರಾರಿನ ಮೂಲಕ ಸರ್ಕಾರವು ನಿರ್ಧರಿಸಬಹುದಾದಂತೆ ಅಷ್ಟರ ಮಟ್ಟಿಗೆ ಶೈಕ್ಷಣಿಕ, ಸಾಮಾಜಿಕ ಮತ್ತು ಆರ್ಥಿಕವಾಗಿ ಹಿಂದುಳಿದ ಅಥವಾ ಅಶಕ್ತ ವರ್ಗದ ವಿದ್ಯಾರ್ಥಿಗಳಿಗೆ ರಿಯಾಯಿತಿ ಸೀಟುಗಳನ್ನು ಒದಗಿಸತಕ್ಕದ್ದು.

**10. ರಾಷ್ಟ್ರೀಯ ಅಧಿಮಾನ್ಯತೆ.–** ವಿಶ್ವವಿದ್ಯಾಲಯವು ಸಂಬಂಧಪಟ್ಟ ಶಾಸನಾತ್ಮಕ ರಾಷ್ಟ್ರೀಯ ಅಧಿಮಾನ್ಯತಾ ಸಂಸ್ಥೆಗಳಿಂದ ಅಧಿಮಾನ್ಯತೆಯನ್ನು ಕೋರತಕ್ಕದ್ದು.

**11. ಪ್ರಾಯೋಜಕ ಸಂಸ್ಥೆಯ ಅಧಿಕಾರಗಳು.–** ಪ್ರಾಯೋಜಕ ಸಂಸ್ಥೆಯು ವಿಶ್ವವಿದ್ಯಾಲಯಕ್ಕೆ ಸಂಬಂಧಿಸಿದಂತೆ ಈ ಮುಂದಿನ ಅಧಿಕಾರಗಳನ್ನು ಹೊಂದಿರತಕ್ಕದ್ದು, ಇವುಗಳಲ್ಲಿ ಪ್ರತಿಯೊಂದನ್ನು ಪ್ರಾಯೋಜಕ ಸಂಸ್ಥೆಯು ತನ್ನ ವಿವೇಚನಾನುಸಾರ ಚಲಾಯಿಸಬಹುದು, ಎಂದರೆ:–

(i) ಕುಲಾಧಿಪತಿಯವರನ್ನು ನೇಮಿಸುವುದು ಅಥವಾ ಪುನರ್‌ನೇಮಿಸುವುದು ಅಥವಾ ಅವರ ನೇಮಕಾತಿಯನ್ನು ಅಂತ್ಯಗೊಳಿಸುವುದು;

(ii) ವಿಶ್ವವಿದ್ಯಾಲಯದ ಪ್ರಥಮ ಪ್ರಬಂಧಕ ಮಂಡಳಿಯನ್ನು ರಚಿಸುವುದು;

(iii) ಪ್ರಬಂಧಕ ಮಂಡಳಿಯ ಅಧ್ಯಕ್ಷರನ್ನು ನಾಮನಿರ್ದೇಶಿಸುವುದು;

(iv) ಪ್ರಬಂಧಕ ಮಂಡಳಿಯ ಸದಸ್ಯರಾಗಿ ಮೂರು ವ್ಯಕ್ತಿಗಳನ್ನು ನಾಮನಿರ್ದೇಶಿಸುವುದು;

(v) ವ್ಯವಸ್ಥಾಪನಾ ಮಂಡಳಿಯ ಸದಸ್ಯರಾಗಿ ಇಬ್ಬರು ವ್ಯಕ್ತಿಗಳನ್ನು ನಾಮ ನಿರ್ದೇಶಿಸುವುದು;

(vi) ವಿಶ್ವವಿದ್ಯಾಲಯದ ದತ್ತಿ ನಿಧಿಗೆ ದೇಣಿಗೆ ನೀಡಲು ನಿಧಿ ಮೂಲಗಳನ್ನು ನಿರ್ಧರಿಸುವುದು;

(vii) ವಿಶ್ವವಿದ್ಯಾಲಯದ ಹಣದ ವಿನಿಯೋಗ ಮತ್ತು ವೆಚ್ಚ ಮಾಡುವುದನ್ನು ನಿರ್ಧರಿಸುವುದು;

(viii) ಈ ಅಧಿನಿಯಮದಲ್ಲಿ ಉಪಬಂಧಿಸಿರುವ ವಿಧಾನದಲ್ಲಿ ಪ್ರಬಂಧಕ ಮಂಡಳಿಯ ಸಭೆಯಲ್ಲಿಯ ವಿವಾದಗಳನ್ನು ಬಗೆಹರಿಸುವುದು;

## ಅಧ್ಯಾಯ – III

## ವಿಶ್ವವಿದ್ಯಾಲಯದ ಅಧಿಕಾರಿಗಳು

**12. ವಿಶ್ವವಿದ್ಯಾಲಯದ ಅಧಿಕಾರಿಗಳು.–** ಈ ಮುಂದಿನವರು ವಿಶ್ವವಿದ್ಯಾಲಯದ ಅಧಿಕಾರಿಗಳಾಗಿರತಕ್ಕದ್ದು, ಎಂದರೆ:–

(i) ಸಂದರ್ಶಕರು;

(ii) ಸಹ–ಸಂದರ್ಶಕರು;

(iii) ಕುಲಾಧಿಪತಿಗಳು;

(iv) ಕುಲಪತಿಗಳು;

(v) ಸಹಕುಲಪತಿಗಳು;

(vi) ಕುಲಸಚಿವರು;

(vii) ಹಣಕಾಸು ಅಧಿಕಾರಿ; ಮತ್ತು

(viii) ಪರಿನಿಯಮಗಳ ಮೂಲಕ ವಿಶ್ವವಿದ್ಯಾಲಯದ ಅಧಿಕಾರಿಗಳೆಂದು ಘೋಷಿಸಬಹುದಾದಂಥ ಇತರ ಅಧಿಕಾರಿಗಳು.

**13. ಸಂದರ್ಶಕರು.–** (1) ಕರ್ನಾಟಕದ ಘನತೆವೆತ್ತ ರಾಜ್ಯಪಾಲರು ವಿಶ್ವವಿದ್ಯಾಲಯದ ಸಂದರ್ಶಕರಾಗಿರತಕ್ಕದ್ದು ಮತ್ತು ಸಂದರ್ಶಕರು ವಿಶ್ವವಿದ್ಯಾಲಯದ ಕಾರ್ಯನಿರ್ವಹಣೆಯ ಸುಧಾರಣೆಗಾಗಿ ಸಲಹೆಗಳನ್ನು ನೀಡಬಹುದು.

(2) ಸಂದರ್ಶಕರು, ಪದವಿಗಳನ್ನು ಮತ್ತು ಡಿಪ್ಲೋಮೊಗಳನ್ನು ಪ್ರದಾನ ಮಾಡಲು ವಿಶ್ವವಿದ್ಯಾಲಯದ ಘಟಿಕೋತ್ಸವದಲ್ಲಿ ಅಧ್ಯಕ್ಷತೆಯನ್ನು ವಹಿಸತಕ್ಕದ್ದು.

(3) ಸಂದರ್ಶಕರು ಈ ಮುಂದಿನ ಅಧಿಕಾರಗಳನ್ನು ಹೊಂದಿರತಕ್ಕದ್ದು, ಎಂದರೆ:–

(i) ವಿಶ್ವವಿದ್ಯಾಲಯದ ವ್ಯವಹಾರಗಳಿಗೆ ಸಂಬಂಧಿಸಿದಂತೆ, ಯಾವುದೇ ಪತ್ರ ಅಥವಾ ಮಾಹಿತಿಯನ್ನು ತರಿಸಿಕೊಳ್ಳುವುದು.

(ii) ಸಂದರ್ಶಕರು, ಅವರು ಸ್ವೀಕರಿಸಿದ ಮಾಹಿತಿಯ ಆಧಾರದ ಮೇಲೆ ವಿಶ್ವವಿದ್ಯಾಲಯಗಳ ಯಾವುದೇ ಪ್ರಾಧಿಕಾರವು ಮಾಡಿದ ಯಾವುದೇ ಆದೇಶ, ನಡೆಸಿದ ವ್ಯವಹರಣೆಗಳು ಅಥವಾ ಕೈಗೊಂಡ ತೀರ್ಮಾನಗಳು, ಈ ಅಧಿನಿಯಮ, ವಿನಿಯಮಗಳು ಅಥವಾ ನಿಯಮಗಳಿಗೆ ಪೂರಕವಾಗಿಲ್ಲವೆಂದು ಮನಗಂಡರೆ ಅವರು ವಿಶ್ವವಿದ್ಯಾಲಯದ ಹಿತಾಸಕ್ತಿಯಿಂದ ತಾವು ಸೂಕ್ತವೆಂದು

ಭಾವಿಸಬಹುದಾದಂಥ ನಿರ್ದೇಶನಗಳನ್ನು ಹೊರಡಿಸಬಹುದು ಮತ್ತು ಹಾಗೆ ಹೊರಡಿಸಿದ ನಿರ್ದೇಶನಗಳನ್ನು ಸಂಬಂಧಪಟ್ಟವರೆಲ್ಲರೂ ಪಾಲಿಸತಕ್ಕದ್ದು.

**14. ಸಹ–ಸಂದರ್ಶಕರು.–** (1) ಕರ್ನಾಟಕ ಸರ್ಕಾರದ ಮಾನ್ಯ ಉನ್ನತ ಶಿಕ್ಷಣ ಸಚಿವರು ವಿಶ್ವವಿದ್ಯಾಲಯದ ಸಹ–ಸಂದರ್ಶಕರಾಗಿರತಕ್ಕದ್ದು.

(2) ಸಂದರ್ಶಕರ ಅನುಪಸ್ಥಿತಿಯಲ್ಲಿ ಸಹ–ಸಂದರ್ಶಕರು ಪದವಿಗಳನ್ನು ಮತ್ತು ಡಿಪ್ಲೋಮೊಗಳನ್ನು ಪ್ರದಾನ ಮಾಡಲು ವಿಶ್ವವಿದ್ಯಾಲಯದ ಘಟಿಕೋತ್ಸವದಲ್ಲಿ ಅಧ್ಯಕ್ಷತೆಯನ್ನು ವಹಿಸತಕ್ಕದ್ದು.

**15. ಕುಲಾಧಿಪತಿಗಳು.–** (1) ಕುಲಾಧಿಪತಿಯವರನ್ನು ಪ್ರಾಯೋಜಕ ಸಂಸ್ಥೆಯು ನೇಮಿಸತಕ್ಕದ್ದು.

(2) ಪ್ರಾಯೋಜಕ ಸಂಸ್ಥೆಯ ಸಂಸ್ಥಾಪಿತ ನ್ಯಾಸಧಾರಿಯು ಮೊದಲನೇ ಕುಲಾಧಿಪತಿಗಳಾಗಿರತಕ್ಕದ್ದು, ಅವರು ತಮ್ಮ ಜೀವನಪರ್ಯಂತ ಅಥವಾ ಅವರು ತಮ್ಮ ಪದವನ್ನು ಬಿಟ್ಟುಕೊಡುವವರೆಗೆ ಕುಲಾಧಿಪತಿಗಳಾಗಿ ಪದಧಾರಣ ಮಾಡಿರತಕ್ಕದ್ದು.

(3) ತದನಂತರದ ಕುಲಾಧಿಪತಿಗಳು, ಅಂಥ ನೇಮಕಾತಿಯನ್ನು ಪರಿಗಣಿಸುವ ಸಂದರ್ಭದಲ್ಲಿ ಪ್ರಾಯೋಜಕ ಸಂಸ್ಥೆಯು ನಿರ್ಧರಿಸಬಹುದಾದಂತೆ, ಪ್ರಾಯೋಜಕ ಸಂಸ್ಥೆಯ ನ್ಯಾಸಧಾರಿಯಾಗಿರತಕ್ಕದ್ದು ಅಥವಾ ಶಿಕ್ಷಣ, ವಿಜ್ಞಾನ, ಸಂಸ್ಕೃತಿ ಅಥವಾ ಸಾರ್ವಜನಿಕ ಜೀವನ ಕ್ಷೇತ್ರಗಳಲ್ಲಿ ರಾಷ್ಟ್ರೀಯ ಮಟ್ಟದ ಛಾಪನ್ನು ಪಡೆದಿರುವ ಅಂಥ ಇತರ ವ್ಯಕ್ತಿಯಾಗಿರತಕ್ಕದ್ದು.

(4) ಹಾಗೆ ನೇಮಕಗೊಂಡ ತದನಂತರದ ಕುಲಾಧಿಪತಿಗಳು ಪ್ರಾಯೋಜಕ ಸಂಸ್ಥೆಯು ನಿರ್ಧರಿಸಬಹುದಾದಂತೆ ಪದಧಾರಣ ಮಾಡತಕ್ಕದ್ದು.

(5) ಕುಲಾಧಿಪತಿಗಳು ಈ ಅಧಿನಿಯಮದ ಅಥವಾ ಅದರಡಿಯಲ್ಲಿ ರಚಿಸಿದ ಪರಿನಿಯಮಗಳ ಅಡಿಯಲ್ಲಿ ಅವರಿಗೆ ಪ್ರದಾನ ಮಾಡಬಹುದಾದಂಥ ಅಧಿಕಾರಗಳನ್ನು ಹೊಂದಿರತಕ್ಕದ್ದು, ಅವುಗಳಲ್ಲಿ ಈ ಮುಂದಿನ ಅಧಿಕಾರಗಳು ಒಳಗೊಂಡಿರತಕ್ಕದ್ದು, ಎಂದರೆ:–

(i) ವಿಶ್ವವಿದ್ಯಾಲಯದ ಮುಖ್ಯಸ್ಥರಾಗಿ ಕಾರ್ಯ ನಿರ್ವಹಿಸುವುದು;

(ii) ಸಂದರ್ಶಕರ ಮತ್ತು ಸಹ–ಸಂದರ್ಶಕರಿಬ್ಬರ ಗೈರುಹಾಜರಿಯಲ್ಲಿ ವಿಶ್ವವಿದ್ಯಾಲಯದ ಎಲ್ಲಾ ಘಟಿಕೋತ್ಸವಗಳಲ್ಲಿ ಅಧ್ಯಕ್ಷತೆಯನ್ನು ವಹಿಸುವುದು;

(iii) ವಿಶ್ವವಿದ್ಯಾಲಯದ ಪ್ರಬಂಧಕ ಮಂಡಳಿಯ ಅಧ್ಯಕ್ಷರಾಗಿ ಕಾರ್ಯ ನಿರ್ವಹಿಸುವುದು;

(iv) ಈ ಅಧಿನಿಯಮ ಮತ್ತು ಪರಿನಿಯಮಗಳ ಉಪಬಂಧಗಳಿಗೆ ಅನುಸಾರವಾಗಿ ಕುಲಪತಿಗಳನ್ನು ನೇಮಿಸುವುದು ಅಥವಾ ಪುನರ್ನೇಮಿಸುವುದು ಅಥವಾ ಅವರ ನೇಮಕಾತಿಯನ್ನು ಅಂತ್ಯಗೊಳಿಸುವುದು;

(v) ಈ ಅಧಿನಿಯಮದ 16ನೇ ಪ್ರಕರಣದ (2)ನೇ ಉಪಪ್ರಕರಣದಲ್ಲಿ ಉಲ್ಲೇಖಿಸಿದ ನಾಮನಿರ್ದೇಶಕ ಸಮಿತಿಯ ಸದಸ್ಯರಾಗಿ ಒಬ್ಬ ವ್ಯಕ್ತಿಯನ್ನು ನಾಮನಿರ್ದೇಶನ ಮಾಡುವುದು;

(vi) ಸಹಕುಲಪತಿಗಳು, ಡೀನ್, ಕುಲಸಚಿವರು ಹಾಗೂ ಹಣಕಾಸು ಅಧಿಕಾರಿಗಳ ನೇಮಕಾತಿಯನ್ನು ಪೂರ್ವಾನುಮೋದಿಸುವುದು;

(vii) ಪ್ರಬಂಧಕ ಮಂಡಳಿಯ ಸದಸ್ಯರನ್ನಾಗಿ ಇಬ್ಬರು ಶಿಕ್ಷಣ ತಜ್ಞರನ್ನು ನಾಮನಿರ್ದೇಶಿಸುವುದು;

(viii) ಮೊದಲ ಸಹಕುಲಪತಿಗಳು ಮತ್ತು ಹಣಕಾಸು ಅಧಿಕಾರಿಗಳನ್ನು ನೇಮಿಸುವುದು;

(ix) ಮೊದಲ ವ್ಯವಸ್ಥಾಪನಾ ಮಂಡಳಿ, ಹಣಕಾಸು ಸಮಿತಿ, ಸಂಶೋಧನಾ ಪರಿಷತ್ತು ಹಾಗೂ ಶೈಕ್ಷಣಿಕ ಪರಿಷತ್ತುಗಳನ್ನು ರಚಿಸುವುದು;

(x) ಈ ಅಧಿನಿಯಮದಲ್ಲಿ ಉಪಬಂಧಿಸಿದ ವಿಧಾನದಲ್ಲಿ ಕಾರ್ಯಸೂಚಿ ವಿಷಯಗಳನ್ನು ಪೂರ್ವಾನುಮೋದಿಸುವುದು;

(xi) ಈ ಅಧಿನಿಯಮದಲ್ಲಿ ಉಪಬಂಧಿಸಿದ ವಿಧಾನದಲ್ಲಿ (ಪ್ರಬಂಧಕ ಮಂಡಳಿಯ ಸಭೆಯಲ್ಲಿ ಉಂಟಾದ ವಿವಾದಗಳನ್ನು ಹೊರತುಪಡಿಸಿ) ವಿವಾದಗಳನ್ನು ಪರಿಹರಿಸುವುದು.

(6) ಪದಾಧಿಕಾರಿ ಅಥವಾ ಪದಾಧಿಕಾರಿಗಳು ಅಥವಾ ಸಂಸ್ಥೆ ಅಥವಾ ಸಂಸ್ಥೆಗಳು ಮತ್ತು ವಿಶ್ವವಿದ್ಯಾಲಯದ ಯಾವುದೇ ಇತರ ಪದಾಧಿಕಾರಿ ಅಥವಾ ಸಂಸ್ಥೆಗಳ ನಡುವೆ ವಿವಾದಗಳು ಉಂಟಾದಲ್ಲಿ, ಆ ವಿವಾದವನ್ನು ಕುಲಾಧಿಪತಿಯವರ ಪರ್ಯಾಲೋಚನೆಗೆ ಕಳುಹಿಸತಕ್ಕದ್ದು ಮತ್ತು ಅಂಥ ವಿವಾದದ ಸಂದರ್ಭದಲ್ಲಿ ಕುಲಾಧಿಪತಿಯವರ ತೀರ್ಮಾನವು ಅಂತಿಮವಾಗಿರತಕ್ಕದ್ದು ಮತ್ತು ಅದಕ್ಕೆ ವಿಶ್ವವಿದ್ಯಾಲಯವು ಬದ್ಧವಾಗಿರತಕ್ಕದ್ದು.

**16. ಕುಲಪತಿಗಳು.–** (1) (2)ನೇ ಉಪಪ್ರಕರಣದ ಉಪಬಂಧಗಳಿಗೆ ಅನುಸಾರವಾಗಿ ನಾಮನಿರ್ದೇಶಕ ಸಮಿತಿಯು ಶಿಫಾರಸ್ಸು ಮಾಡಿದ ಮೂರು ವ್ಯಕ್ತಿಗಳ ಪೈಕಿಯಿಂದ ಒಬ್ಬರನ್ನು ಕುಲಪತಿಗಳಾಗಿ, ಪರಿನಿಯಮಗಳಲ್ಲಿ ನಿಯಮಿಸಬಹುದಾದಂಥ ನಿಬಂಧನೆಗಳು ಮತ್ತು ಷರತ್ತುಗಳ ಮೇಲೆ

ಕುಲಾಧಿಪತಿಯವರು ನೇಮಿಸತಕ್ಕದ್ದು. ಮೂರು ವರ್ಷಗಳ ಅವಧಿಯು ಮುಗಿದ ತರುವಾಯ, ಇದನ್ನು ಮೂರು ವರ್ಷಗಳ ಮತ್ತೊಂದು ಅವಧಿಗೆ ನವೀಕರಿಸಬಹುದು:

ಪರಂತು, ಕುಲಪತಿಯವರು, ತಮ್ಮ ಅವಧಿ ಮುಗಿದ ನಂತರವೂ ಹೊಸ ಕುಲಪತಿಯವರು ಸೇರಿಕೊಳ್ಳುವವರೆಗೆ ಪದದಲ್ಲಿ ಮುಂದುವರೆಯತಕ್ಕದ್ದು. ಆದಾಗ್ಯೂ ಈ ಅವಧಿಯು ಯಾವುದೇ ಸಂದರ್ಭದಲ್ಲಿ ಒಂದು ವರ್ಷವನ್ನು ಮೀರತಕ್ಕದ್ದಲ್ಲ.

(2) (1)ನೇ ಉಪಪ್ರಕರಣದಲ್ಲಿ ಹೇಳಿರುವ ನಾಮನಿರ್ದೇಶಕ ಸಮಿತಿಯಲ್ಲಿ ಈ ಮುಂದಿನ ವ್ಯಕ್ತಿಗಳು ಇರತಕ್ಕದ್ದು, ಎಂದರೆ:–

(i) ಕುಲಾಧಿಪತಿಯವರು ನಾಮನಿರ್ದೇಶಿಸಿದ ಒಬ್ಬ ವ್ಯಕ್ತಿ;

(ii) ಪ್ರಬಂಧಕ ಮಂಡಳಿಯ ಇಬ್ಬರು ನಾಮ ನಿರ್ದೇಶಿತರು, ಇವರಲ್ಲಿ ಒಬ್ಬರನ್ನು ಪ್ರಬಂಧಕ ಮಂಡಳಿಯು ಸಮಿತಿಯ ಸಂಚಾಲಕರೆಂದು ನಾಮನಿರ್ದೇಶಿಸತಕ್ಕದ್ದು.

(3) ನಾಮನಿರ್ದೇಶಕ ಸಮಿತಿಯು, ಅರ್ಹತೆಯ ಆಧಾರದ ಮೇಲೆ ಕುಲಪತಿಯ ಹುದ್ದೆಗೆ ಸೂಕ್ತವಾದ ಮೂರು ವ್ಯಕ್ತಿಗಳ ಹೆಸರನ್ನು ಶಿಫಾರಸ್ಸು ಮಾಡತಕ್ಕದ್ದು ಮತ್ತು ಅದನ್ನು ಪ್ರತಿಯೊಬ್ಬ ವ್ಯಕ್ತಿಯ ವಿದ್ಯಾರ್ಹತೆ ಮತ್ತಿತರ ವಿಶಿಷ್ಟ ಪ್ರಶಸ್ತಿಗಳನ್ನು ತಿಳಿಸುವ ಒಂದು ಸಂಕ್ಷಿಪ್ತ ವರದಿಯೊಂದಿಗೆ ಕುಲಾಧಿಪತಿಯವರಿಗೆ ಕಳುಹಿಸತಕ್ಕದ್ದು.

(4) ಕುಲಪತಿಯವರು ವಿಶ್ವವಿದ್ಯಾಲಯದ ಪ್ರಧಾನ ಕಾರ್ಯನಿರ್ವಾಹಕ ಮತ್ತು ಶೈಕ್ಷಣಿಕ ಅಧಿಕಾರಿಯಾಗಿರತಕ್ಕದ್ದು ಮತ್ತು ವಿಶ್ವವಿದ್ಯಾಲಯದ ವ್ಯವಹಾರಗಳ ಬಗ್ಗೆ ಸಾಮಾನ್ಯ ಮೇಲ್ವಿಚಾರಣೆ ಮತ್ತು ನಿಯಂತ್ರಣವನ್ನು ಚಲಾಯಿಸತಕ್ಕದ್ದು ಹಾಗೂ ವಿಶ್ವವಿದ್ಯಾಲಯದ ಪ್ರಾಧಿಕಾರಗಳ ತೀರ್ಮಾನಗಳನ್ನು ಜಾರಿಗೊಳಿಸತಕ್ಕದ್ದು:

ಪರಂತು, ಶಿಕ್ಷಕರ ನೇಮಕಾತಿಯನ್ನು ಹೊರತುಪಡಿಸಿ ಕೂಡಲೇ ಕ್ರಮವನ್ನು ಕೈಗೊಳ್ಳಬೇಕಾದ ತುರ್ತು ಸ್ವರೂಪದ ಯಾವುದೇ ಇತರ ವಿಷಯಗಳಲ್ಲಿ ಮತ್ತು ಅದನ್ನು ಈ ಅಧಿನಿಯಮದ ಮೂಲಕ ಅಥವಾ ಅದರ ಅಡಿಯಲ್ಲಿ ವಿಶ್ವವಿದ್ಯಾಲಯವು ಇದಕ್ಕಾಗಿ ಅಧಿಕೃತಗೊಳಿಸಿದ್ದ ಯಾವೊಬ್ಬ ಅಧಿಕಾರಿ ಅಥವಾ ಪ್ರಾಧಿಕಾರ ಅಥವಾ ಇತರ ಸಂಸ್ಥೆಯು ಕೂಡಲೇ ಕ್ರಮಕೈಗೊಳ್ಳುವುದು ಸಾಧ್ಯವಿರದಿರುವಾಗ ಕುಲಪತಿಯವರು ತಾನು ಸೂಕ್ತವೆಂದು ಭಾವಿಸಬಹುದಾದಂತಹ ಕ್ರಮವನ್ನು ಕುಲಾಧಿಪತಿಯವರ ಲಿಖಿತ ಪೂರ್ವಾನುಮೋದನೆಯನ್ನು ಪಡೆದು ಕೈಗೊಳ್ಳತಕ್ಕದ್ದು.

(5) ಕುಲಪತಿಯವರು ಪರಿನಿಯಮಗಳು ಅಥವಾ ನಿಯಮಗಳಲ್ಲಿ ಹೇಳಲಾದ ಅಂಥ ಇತರ ಅಧಿಕಾರಗಳನ್ನು ಚಲಾಯಿಸತಕ್ಕದ್ದು ಹಾಗೂ ಅಂಥ ಇತರ ಕರ್ತವ್ಯಗಳನ್ನು ನೆರವೇರಿಸತಕ್ಕದ್ದು:

ಪರಂತು, ಕುಲಪತಿಗಳ ಅಭಿಪ್ರಾಯದಲ್ಲಿ, ವಿಶ್ವವಿದ್ಯಾಲಯದ ಯಾವುದೇ ಪ್ರಾಧಿಕಾರದ ಯಾವುದೇ ನಿರ್ಣಯವು, ಈ ಅಧಿನಿಯಮ ಅಥವಾ ಅದರಡಿಯಲ್ಲಿ ರಚಿಸಿದ ಪರಿನಿಯಮಗಳು, ವಿನಿಯಮಗಳು ಅಥವಾ ನಿಯಮಗಳ ಮೂಲಕ ಪ್ರದತ್ತವಾದ ಅಧಿಕಾರದ ಹೊರಗಿದ್ದರೆ ಅಥವಾ ವಿಶ್ವವಿದ್ಯಾಲಯದ ಹಿತಾಸಕ್ತಿಗೆ ಪ್ರತಿಕೂಲವಾಗಬಹುದಾಗಿದ್ದರೆ, ಅದರ ನಿರ್ಣಯದ ದಿನಾಂಕದಿಂದ ಹದಿನೈದು ದಿನಗಳ ಒಳಗೆ ತನ್ನ ನಿರ್ಣಯವನ್ನು ಪರಿಷ್ಕರಿಸಲು ಸಂಬಂಧಪಟ್ಟ ಪ್ರಾಧಿಕಾರವನ್ನು ಆತನು ಕೋರತಕ್ಕದ್ದು ಮತ್ತು ಪ್ರಾಧಿಕಾರವು ಅಂಥ ನಿರ್ಣಯವನ್ನು ಸಂಪೂರ್ಣವಾಗಿ ಅಥವಾ ಭಾಗಶ:ವಾಗಿ ಪರಿಷ್ಕರಿಸಲು ನಿರಾಕರಿಸಿದ ಸಂದರ್ಭದಲ್ಲಿ ಅಥವಾ ಹದಿನೈದು ದಿನಗಳೊಳಗೆ ಯಾವುದೇ ನಿರ್ಣಯವನ್ನು ತೆಗೆದುಕೊಳ್ಳಲು ವಿಫಲವಾದಲ್ಲಿ, ನಂತರ ಅಂಥ ವಿಷಯವನ್ನು ಕುಲಾಧಿಪತಿಗಳಿಗೆ ಕಳುಹಿಸತಕ್ಕದ್ದು ಮತ್ತು ಈ ಬಗ್ಗೆ ಇವರ ತೀರ್ಮಾನವೇ ಅಂತಿಮವಾಗಿರತಕ್ಕದ್ದು.

(6) ಕುಲಪತಿಯವರ ಸೇವೆಗಳನ್ನು, ಪ್ರಬಂಧಕ ಮಂಡಳಿಯ ಅನುಮೋದನೆಯೊಂದಿಗೆ ಮತ್ತು ಸಹಜ ನ್ಯಾಯದ ತತ್ವಗಳನ್ನು ಅನುಸರಿಸಿದ ನಂತರ ಹಾಗೂ ಶಿಸ್ತಿನ ಆಧಾರದ ಮೇಲೆ ಅಂತ್ಯಗೊಳಿಸುವ ಸಂದರ್ಭವೂ ಸೇರಿದಂತೆ, ಪ್ರಕರಣದ ಬಗ್ಗೆ ಕುಲಪತಿಯು ತನ್ನ ಅಹವಾಲನ್ನು ಹೇಳಿಕೊಳ್ಳಲು ಸೂಕ್ತ ಅವಕಾಶವನ್ನು ನೀಡಿದ ತರುವಾಯ, ಕುಲಾಧಿಪತಿಯವರು ಅಂತ್ಯಗೊಳಿಸಬಹುದು.

(7) ವಿಶ್ವವಿದ್ಯಾಲಯದ ಘಟಿಕೋತ್ಸವದಲ್ಲಿ ಸಂದರ್ಶಕರು, ಸಹ-ಸಂದರ್ಶಕರು ಮತ್ತು ಕುಲಾಧಿಪತಿಯವರು ಇವರುಗಳ ಗೈರು ಹಾಜರಿಯ ಸಂದರ್ಭದಲ್ಲಿ ಕುಲಪತಿಯವರು ಅಧ್ಯಕ್ಷತೆಯನ್ನು ವಹಿಸತಕ್ಕದ್ದು.

**17. ಸಹಕುಲಪತಿಗಳು.–** ಕುಲಪತಿಯವರು, ಕುಲಾಧಿಪತಿಯವರ ಲಿಖಿತ ಅನುಮೋದನೆಯನ್ನು ಪಡೆದುಕೊಂಡು ಮೂರು ಜನರನ್ನು ಮೀರದಂತೆ ಸಹಕುಲಪತಿಗಳನ್ನು ಪರಿನಿಯಮಗಳ ಮೂಲಕ ನಿಯಮಿಸಬಹುದಾದಂಥ ವಿಧಾನದಲ್ಲಿ ನೇಮಕಮಾಡತಕ್ಕದ್ದು ಮತ್ತು ಅವರು ಅಂಥ ಅಧಿಕಾರಗಳನ್ನು ಚಲಾಯಿಸತಕ್ಕದ್ದು ಹಾಗೂ ಅಂಥ ಕರ್ತವ್ಯಗಳನ್ನು ನೆರವೇರಿಸತಕ್ಕದ್ದು.

**18. ವ್ಯಾಸಂಗ ವಿಭಾಗಗಳ ಡೀನ್‌ಗಳು.–** ಕುಲಪತಿಯವರು, ಕುಲಾಧಿಪತಿಯವರ ಲಿಖಿತ ಅನುಮೋದನೆಯನ್ನು ಪಡೆದುಕೊಂಡು ಪರಿನಿಯಮಗಳ ಮೂಲಕ ನಿಯಮಿಸಬಹುದಾದ ಅಂಥ ವಿಧಾನದಲ್ಲಿ ವ್ಯಾಸಂಗ ವಿಭಾಗಗಳ ಡೀನ್‌ಗಳನ್ನು ನೇಮಕಮಾಡತಕ್ಕದ್ದು ಮತ್ತು ಅವರು ಅಂಥ ಅಧಿಕಾರಗಳನ್ನು ಚಲಾಯಿಸತಕ್ಕದ್ದು ಹಾಗೂ ಅಂಥ ಕರ್ತವ್ಯಗಳನ್ನು ನೆರವೇರಿಸತಕ್ಕದ್ದು.

